716

# ಶಿಕ್ಷಾಪ್ರದ ಹನ್ನೊಂದು ಕಥೆಗಳು

## शिक्षाप्रद ग्यारह कहानियाँ ( कन्नड़ )

---

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥

---

ಹಿಂದೀ ಮೂಲ ಲೇಖಕರು :

**ಜಯದಯಾಲ ಗೋಯಂದಕಾ**

ಅನುವಾದಕರು :

**ತಂ.ಶ್ರೀ.ನ. ಮೂರ್ತಿ**

ಪರಿಷ್ಕರಣೆ :

**ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್**

॥ ಶ್ರೀ ಹರಿಃ ॥

# ನಮ್ರ ನಿವೇದನ

ಈ ಪುಸ್ತಕದಲ್ಲಿ ಪೂಜ್ಯ ಶ್ರೀ ಜಯದಯಾಲಜೀ ಗೋಯಂದಕಾರವರು ಬರೆದಿರುವ ಶಿಕ್ಷಾಪ್ರದ ಹನ್ನೊಂದು ಕಥೆಗಳು ಪ್ರಕಾಶಿತವಾಗುತ್ತಾ ಇವೆ. ಇವು ಹಿಂದಿ ಧಾರ್ಮಿಕ ಮಾಸ ಪತ್ರಿಕೆ 'ಕಲ್ಯಾಣ'ದಲ್ಲಿ ಆಗಾಗ್ಗೆ ಪ್ರಕಾಶಿಸಲ್ಪಟ್ಟಿವೆ. ಕಥೆಗಳಲ್ಲಿ ಕೇವಲ ಕಲೆಯನ್ನು ನೋಡುವವರಿಗೆ ಇವುಗಳಿಂದ ನಿರಾಶೆಯುಂಟಾಗಬಹುದು. ಅಂತಹವರಿಗಾಗಿ ಇವು ಬರೆಯಲೂ ಇಲ್ಲ. ಆದಾಗ್ಯೂ ಗೃಹಸ್ಥ ಅಥವಾ ಸಾಧಕರು ತಮ್ಮ ಲೌಕಿಕ ಪಾರಲೌಕಿಕ ಉನ್ನತಿ ಬಯಸುವವರಿಗಾಗಿ ಈ ಸರಳ ಭಾಷೆಯಲ್ಲಿ ಬರೆಯಲ್ಪಟ್ಟ ಸುಂದರ ಕಥೆಗಳಲ್ಲಿ ಅತ್ಯುತ್ತಮ ಉಪದೇಶ ಹಾಗೂ ಆದರ್ಶಗಳು ದೊರೆಯಬಲ್ಲವು. ಎಲ್ಲರೂ ಈ ಕಥೆಗಳಿಂದ ಲಾಭ ಪಡೆಯುವಂತಾಗಲೆಂದು ನನ್ನ ಪ್ರಾರ್ಥನೆ.

ಪ್ರಾರ್ಥಿ,

**ಹನುಮಾನ ಪ್ರಸಾದ ಪೋದ್ದಾರ**



॥ ಶ್ರೀ ಹರಿಃ ॥

# ವಿಷಯ ಸೂಚಿ





॥ ಓಂ ಶ್ರೀ ಪರಮಾತ್ಮನೇ ನಮಃ ॥

# ಶಿಕ್ಷಾಪ್ರದ ಹನ್ನೊಂದು ಕಥೆಗಳು

## ೧. ಯೋಗಕ್ಷೇಮದ ಹೊಣೆ

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**
(ಗೀತಾ ೯/೨೨)

'ಅನನ್ಯಪ್ರೇಮಿ ಭಕ್ತರು ಪರಮೇಶ್ವರನಾದ ನನ್ನನ್ನು ನಿರಂತರ ಚಿಂತನೆ ಮಾಡುತ್ತಾ, ನಿಷ್ಕಾಮಭಾವದಿಂದ ಭಜಿಸುತ್ತಾ, ನಿತ್ಯ-ನಿರಂತರ ನನ್ನ ಚಿಂತನೆ ಮಾಡುತ್ತಾ ಇರುವವರ ಯೋಗಕ್ಷೇಮವನ್ನು ನಾನೇ ಸ್ವತಃ ವಹಿಸಿಕೊಳ್ಳುತ್ತೇನೆ.'

ಕೆಲವರು ಈ ಶ್ಲೋಕಕ್ಕೆ ಸರ್ವಥಾ ಸಕಾಮ ಮತ್ತು ನಿವೃತ್ತಿ ಪೂರ್ವಕವಾದ ಅರ್ಥವನ್ನು ಮಾಡುತ್ತಾರೆ. ಅಲ್ಲದೆ ಸಂಸಾರದ ಬಗ್ಗೆ ಸ್ವಲ್ಪವೂ ಸಹ ಯೋಚಿಸುವುದೇ ಇಲ್ಲ. ಕೇವಲ ಭಗವಂತನನ್ನೇ ಅವಲಂಬಿಸಿರುತ್ತಾ ಭಜಿಸುವುದೇ ಉಚಿತವಾದುದೆಂದು ಭಾವಿಸುತ್ತಾರೆ. ಇದಕ್ಕೆ ಅವರು ಈ ಕೆಳಗಿನಂತೆ ದೃಷ್ಟಾಂತವನ್ನೂ ಕೊಡುತ್ತಾರೆ.

ಈಶ್ವರ ಭಕ್ತನಾದ ಗೀತಾಭ್ಯಾಸೀ ನಿವೃತ್ತಿ ಪ್ರಿಯ ಒಬ್ಬ ಬ್ರಾಹ್ಮಣನಿದ್ದನು ಆತನು ಅರ್ಥವನ್ನು ತಿಳಿದುಕೊಳ್ಳುತ್ತಾ ಗೀತೆಯನ್ನು ಸಂಪೂರ್ಣವಾಗಿ ಪದೇ ಪದೇ ಪಾರಾಯಣ ಮಾಡುವುದರಲ್ಲಿ ಮತ್ತು ಭಗವಂತನ ನಾಮಜಪ ಹಾಗೂ ಆತನ ಸ್ವರೂಪದ ಧ್ಯಾನಮಾಡುವುದರಲ್ಲಿಯೇ ತನ್ನೆಲ್ಲಾ ಸಮಯವನ್ನು ಕಳೆಯುತ್ತಿದ್ದನು. ಆತನು ಏಕಮಾತ್ರ ಭಗವಂತನಲ್ಲಿಯೇ ಅವಲಂಬಿತನಾಗಿದ್ದನು. ಜೀವನೋಪಾಯಕ್ಕೆ ಹೇಳುವುದೇನು, ಆತನು ತನ್ನ ಊಟೋಪಚಾರದ ಬಗ್ಗೆಯೂ ಸಹ ಯೋಚಿಸುತ್ತಿರಲಿಲ್ಲ. ಆತನ ತಾಯಿ-ತಂದೆಗಳು ಸ್ವರ್ಗಸ್ಥರಾಗಿ ಹೋಗಿದ್ದರು. ಇವರು ಮೂವರು ಅಣ್ಣ ತಮ್ಮಂದಿರು. ಮೂವರೂ ವಿವಾಹಿತರಾಗಿದ್ದರು. ಆತನೇ ಎಲ್ಲರಿಗಿಂತ ದೊಡ್ಡವನಾಗಿದ್ದನು. ಮತ್ತು ಉಳಿದಿಬ್ಬರೂ ಚಿಕ್ಕವರಾಗಿದ್ದರು. ಆ ಚಿಕ್ಕ

ಸಹೋದರರಿಬ್ಬರೂ ಪೌರೋಹಿತ್ಯದ ವೃತ್ತಿಯಲ್ಲಿ ತೊಡಗಿ ಗೃಹ ಕೃತ್ಯದ ಎಲ್ಲಾ ಕೆಲಸಗಳನ್ನೂ ನಡೆಸಿಕೊಂಡು ಹೋಗುತ್ತಿದ್ದರು. ಒಂದು ದಿವಸ ಈ ಇಬ್ಬರು ತಮ್ಮಂದಿರೂ ಅಣ್ಣನೊಡನೆ ಹೇಳಿದರು–'ನೀವು ಸಹ ಸ್ವಲ್ಪ ಸಮಯವನ್ನು ಜೀವನೋಪಾಯದ ಕೆಲಸಕ್ಕಾಗಿ ತೊಡಗಿಸಿಕೊಂಡರೆ ಬಹಳ ಚೆನ್ನಾಗಿರುತ್ತದೆ.' ಅಣ್ಣನು ಹೇಳಿದನು–'ಎಲ್ಲರ ಪಾಲನೆ–ಪೋಷಣೆಮಾಡುವ ವಿಶ್ವಂಭರ ಭಗವಂತನು ಎಲ್ಲೆಲ್ಲಿಯೂ, ಯಾವಾಗಲೂ ಇರುತ್ತಿರುವಾಗ ನಮ್ಮ ಜೀವನಕ್ಕಾಗಿ ಚಿಂತಿಸುವುದು ಕೇವಲ ಹುಡುಗಾಟವೇ ಸರಿ. ಭಗವಂತನು ಗೀತೆಯ ಒಂಭತ್ತನೇ ಅಧ್ಯಾಯದ ಇಪ್ಪತ್ತೆರಡನೇ ಶ್ಲೋಕದಲ್ಲಿ ತಾನೇ ಯೋಗಕ್ಷೇಮದ ಜವಾಬ್ದಾರಿಯ ಭಾರವನ್ನೂ ತೆಗೆದುಕೊಂಡಿದ್ದಾನೆ.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಆದುದರಿಂದ 'ಸಹೋದರರೇ! ನಾವುಗಳಾದರೋ ನಮ್ಮ ಭಗವಂತನನ್ನೇ ಅವಲಂಬಿಸಿಕೊಂಡಿರಬೇಕು. ಆತನು ಬ್ರಹ್ಮನಿಂದ ಹಿಡಿದು ಕ್ಷುದ್ರಾತಿ ಕ್ಷುದ್ರ ಜೀವ–ಜಂತು–ಪರಮಾಣುಗಳವರೆಗೆ ಎಲ್ಲರ ಪಾಲನೆ–ಪೋಷಣೆ ಮಾಡುತ್ತಾನೆ ಮತ್ತೆ ಯಾರು ಆತನನ್ನು ನಂಬಿಕೊಂಡಿದ್ದು ನಿತ್ಯ ನಿರಂತರ ಆತನನ್ನೇ ಸ್ಮರಿಸುತ್ತಾ–ಚಿಂತಿಸುತ್ತಾರೆಯೋ, ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ಆತನು ವಚನಬದ್ಧನಾಗಿದ್ದಾನೆ. ನಾವುಗಳಾದರೋ ನಿತ್ಯವೂ ಅಧ್ಯನ–ಅಧ್ಯಾಪನ ಮತ್ತು ನಿರಂತರ ಶ್ರದ್ಧಾ–ಪ್ರೇಮಗಳಿಂದ ಭಗವಂತನ ಭಜನೆ–ಸ್ಮರಣೆಗಳನ್ನೇ ಮಾಡಬೇಕು'

ಇಬ್ಬರು ಸಹೋದರರೂ ಹೇಳಿದರು– 'ಅಣ್ಣಾ! ನೀವು ಹೇಳುವುದೇನೋ ಸರಿ, ಆದರೆ ಜೀವನೋಪಾಯಕ್ಕಾಗಿ ಕಿಂಚಿತ್ತಾದರೂ ಪ್ರಯತ್ನವನ್ನೇ ಮಾಡದೆ ಮನೆಯಲ್ಲಿ ಕುಳಿತಿರುವವರಿಗೆ ಯಾರಿಗೂ ಭಗವಂತನು ಕೊಡುವುದಿಲ್ಲ.' ಅಣ್ಣನು ನಂಬಿಕೆಯಿಂದ ಉತ್ತರಕೊಟ್ಟನು–'ಶ್ರದ್ಧೆ ಮತ್ತು ನಂಬಿಕೆಗಳಿದ್ದರೆ ಮನೆಯಲ್ಲಿ ಕುಳಿತಿರುವವರಿಗೂ ಸಹ ಭಗವಂತ ಕೊಡಬಲ್ಲನು.' ತಮ್ಮಂದಿರಿಬ್ಬರೂ ಸ್ವಲ್ಪ ಕುಪಿತರಾಗಿ ಹೇಳಿದರು–'ಅಣ್ಣಾ! ಮಾತಿನಿಂದ ಏನೂ ಆಗುವುದಿಲ್ಲ. ನಾವುಗಳು

ಸಂಪಾದಿಸಿಕೊಂಡು ತರುತ್ತೇವೆ. ಅದರಿಂದ ಮನೆಯ ಕೆಲಸ ನಡೆಯುತ್ತದೆ. ನೀವು ಕೇವಲ ಶ್ಲೋಕವನ್ನು ಜಪಿಸುವುದು ಮತ್ತು ದೊಡ್ಡ-ದೊಡ್ಡ ಮಾತುಗಳನ್ನಾಡುವುದನ್ನು ತಿಳಿದುಕೊಂಡಿರುವಿರಿ. ನಾವುಗಳು ಎಷ್ಟು ಕಷ್ಟಪಟ್ಟು ಅಲ್ಪ ಸ್ವಲ್ಪ ಕೂಡಿಸುತ್ತೇವೆಂದು ನಿಮಗೇನು ಗೊತ್ತು? ನೀವು ನಮ್ಮಿಂದ ಬೇರೆಯಾಗಿ ಹೋಗಿ ಗೃಹಕೃತ್ಯ ನಡೆಸಿದರೆ, ಆಗ ಗೊತ್ತಾಗುತ್ತದೆ, ಆಗ ಜೀವನೋಪಾಯಕ್ಕಾಗಿ ಪ್ರಯತ್ನಮಾಡದೇ ನಿಮ್ಮ ಕೆಲಸ ಹೇಗೆ ನಡೆಯುತ್ತದೆ ಎಂಬುದನ್ನು ನಾವೂ ನೋಡುವೆವು.' ಅಣ್ಣನು ಧೈರ್ಯದಿಂದ ಹೇಳಿದನು-'ಸಹೋದರರರೇ! ನೀವು ಇದೇ ಸರಿಯೆಂದು ತಿಳಿದುಕೊಂಡರೆ ಬಹಳ ಸಂತೋಷ. ನನ್ನನ್ನು ಬೇರೆ ಮಾಡಿ ಕೊಡಿರಿ. ನಾನು ಯಾರಿಗೂ ಭಾರರೂಪವಾಗಿರಲು ಇಚ್ಛಿಸುವುದಿಲ್ಲ. ಭಗವಂತನಿಗೆ ಹೇಗೆ ನನ್ನನ್ನು ನಿರ್ವಹಿಸಬೇಕೆಂಬುದು ಬಹು ಚೆನ್ನಾಗಿ ಗೊತ್ತು.' ಅದಕ್ಕೆ ಸಹೋದರರಿಬ್ಬರೂ ನಿಶ್ಚಿಂತರಾಗಿ ಹೇಳಿದರು-'ಬಹಳ ಒಳ್ಳೆಯದು ನಾಳೆಯೇ ನಾವೆಲ್ಲರೂ ನಮ್ಮ-ನಮ್ಮ ಭಾಗಕ್ಕೆ ಅನುಸಾರವಾಗಿ ಹಂಚಿಕೊಳ್ಳಬೇಕು.' ಅಣ್ಣನು ಹೇಳಿದನು-'ನಿಮಗೆ ಯಾವುದು ಸರಿಯೆಂದು ತಿಳಿಯುತ್ತದೆಯೋ ಅದೇ ಪ್ರಕಾರ ಮಾಡಬಹುದು, ಅದಕ್ಕೆ ನನ್ನಿಂದ ಯಾವ ಅಡ್ಡಿಯೂ ಇಲ್ಲ. ನಾನಾದರೋ ನಿಮ್ಮ ಒಪ್ಪಿಗೆಯಂತೆ ಸಹಮತನಾಗಿದ್ದೇನೆ.'

ಮರು ದಿವಸವೇ ಇಬ್ಬರು ಸಹೋದರರೂ, ಇದ್ದ ಸಾಮಾನು ಸಂಪತ್ತನ್ನು ಮೂರು ಭಾಗ ಮಾಡಿದರು. ಬ್ರಾಹ್ಮಣ ಭಕ್ತನ ಪಾಲಿಗೆ ಒಂದು ಸಾಧಾರಣವಾದ ಮನೆ, ಸ್ವಲ್ಪ ಹಣ ಮತ್ತು ಕೆಲವು ಸಾಧಾರಣವಾದ ಒಡವೆ ಬಟ್ಟೆ ಹಾಗೂ ಅಡಿಗೆ ಪಾತ್ರೆ ಮುಂತಾದವು ಬಂದುವು. ಮೂರನೇ ಭಾಗದ ಪೌರೋಹಿತ್ಯದ ವೃತ್ತಿಯನ್ನೂ ಸಹ ಆತನ ಹಿಸ್ಸೆಗೆ ಕೊಡಲಾಯಿತು. ಆದರೆ ಪೌರೋಹಿತ್ಯದ ಸ್ಥಿತಿ ಹೀಗಿತ್ತು ಯಾರಾದರೂ ಆತನಿಂದ ಪುರೋಹಿತ ಕೆಲಸ ನಡೆಸಿದರೆ, ಅವರಿಂದ ಅಲ್ಪ-ಸ್ವಲ್ಪ ತೆಗೆದುಕೊಂಡು ಬರುವುದು, ಮನೆಯಲ್ಲಿ ಕುಳಿತಿರುವ ಪುರೋಹಿತರನ್ನು ಯಾರೂ ಜ್ಞಾಪಿಸಿಕೊಳ್ಳುವುದಿಲ್ಲ.

ಈ ಪ್ರಕಾರ ಮೂವರು ಸಹೋದರರೂ ಬೇರೆ ಬೇರೆಯಾಗಿ ಹೋದಾಗ ಆ ಬ್ರಾಹ್ಮಣ ಭಕ್ತನು ತನ್ನ ಪತ್ನಿಯೊಡನೆ ಹೇಳಿದನು-'ನನ್ನ ತಮ್ಮಂದಿರು ಏನು

ಕೊಟ್ಟಿರುವರೋ, ಅದು ಬಹಳ ಸಂತೋಷಜನಕವಾಗಿದೆ, ಆದರೆ ಈಗ ನಾವು ಕೇವಲ ಭಗವಂತನನ್ನೇ ಅವಲಂಬಿಸಿರಬೇಕೆಂಬ ಮಾತಿನ ಕಡೆಗೆ ಪೂರ್ಣಗಮನ ಕೊಡಬೇಕು. ಯಾರ ಮನೆಗೂ ಹೋಗಿ ಎಂದಿಗೂ ಏನನ್ನೂ ಯಾಚಿಸಬಾರದು. ಭಗವಂತ ಸ್ವತಃ ತಾನೇ ಯೋಗಕ್ಷೇಮವನ್ನು ನಿರ್ವಹಿಸುವವನಾಗಿದ್ದಾನೆ, ಆತನೇ ನಮ್ಮ ಯೋಗಕ್ಷೇಮವನ್ನೂ ನೋಡಿಕೊಳ್ಳುವನು. ತಮ್ಮಂದಿರು ಏನು ಕೊಟ್ಟಿದ್ದಾರೆಯೋ, ಅದರಿಂದಲೇ ಈಗ ಸಂಸಾರ ಸಾಗಿಸಬೇಕು.'

ಆ ಬ್ರಾಹ್ಮಣನ ಪತ್ನಿಯೂ ಈಶ್ವರನ ಭಕ್ತಳು ಮತ್ತು ಪತಿವ್ರತೆಯಾಗಿದ್ದಳು. ಆಕೆಯು ಪತಿಯ ಮಾತನ್ನು ಬಹಳ ಆದರದಿಂದ ಸ್ವೀಕರಿಸಿದಳು. ಆಕೆಯು ಹೀಗೆ ಯೋಚಿಸಿದಳು–'ಈಗೇನೋ ಸಂಸಾರ ನಿರ್ವಹಿಸಲು ಸ್ವಲ್ಪ ಕೈಯಲ್ಲಿದೆ. ಅದು ಮುಗಿದುಹೋದ ನಂತರ ಸ್ವಾಮಿಯು ಯಾವುದು ಉಚಿತವೆಂದು ತಿಳಿಯುವರೋ ಅದರಂತೆ ತಾವೇ ವ್ಯವಸ್ಥೆ ಮಾಡುವರು.'

ಆ ಭಗವದ್ಭಕ್ತ ಬ್ರಾಹ್ಮಣನು ಪ್ರಾತಃಕಾಲ ನಾಲ್ಕು ಘಂಟೆಗೆ ಏಳುತ್ತಿದ್ದನು ಮತ್ತು ಪಟ್ಟಣದಿಂದ ಒಂದು ಮೈಲಿ ದೂರದ ಒಂದು ಕೆರೆಗೆ ಹೋಗಿ ಶೌಚ-ಸ್ನಾನಾದಿಗಳನ್ನು ಮುಗಿಸುತ್ತಿದ್ದನು. ಮತ್ತೆ ಸಂಧ್ಯಾವಂದನೆಯ ನಂತರ ಭಗವಂತನ ಮಾನಸ ಪೂಜೆ, ಜಪ, ಧ್ಯಾನ ಮಾಡಿ ಸಂಪೂರ್ಣವಾಗಿ ಗೀತೆಯನ್ನು ಭಾವಸಹಿತ ಅರ್ಥವನ್ನು ತಿಳಿದುಕೊಳ್ಳುತ್ತಾ ಅಭ್ಯಾಸ ಮಾಡುತ್ತಿದ್ದನು, ಅನಂತರ ಹನ್ನೊಂದು ಘಂಟೆಗೆ ಮನೆಗೆ ಹಿಂದಿರುಗಿ ಬಂದು ಭೋಜನಾದಿ ಮಾಡುತ್ತಿದ್ದನು. ಊಟವಾದ ಮೇಲೆ ಪುನಃ ಮಧ್ಯಾಹ್ನ ಒಂದು ಘಂಟೆಗೆ ಅದೇ ಕೆರೆಗೆ ಹೋಗಿ ಜಪ, ಧ್ಯಾನ, ಸ್ವಾಧ್ಯಾಯ ಮಾಡುತ್ತಿದ್ದನು. ಪುನಃ ಸಾಯಂಕಾಲ ನಾಲ್ಕು ಘಂಟೆಗೆ ಶೌಚ-ಸ್ನಾನಾದಿ ಗಳನ್ನು ಮಾಡಿ ಸಂಧ್ಯಾವಂದನೆ ಮಾಡುತ್ತಿದ್ದನು. ಅನಂತರ ಮಾನಸ ಪೂಜೆ ಮಾಡಿ ಸತ್-ಶಾಸ್ತ್ರಗಳ ಸ್ವಾಧ್ಯಾಯವನ್ನು ಶ್ರದ್ಧೆಯಿಂದ ಮಾಡುತ್ತಿದ್ದನು. ಸೂರ್ಯಾಸ್ತದ ನಂತರ ಭಗವಂತನ ನಾಮ ಜಪ ಮತ್ತು ಆತನ ಸ್ವರೂಪದ ಧ್ಯಾನ ಮಾಡುತ್ತಿದ್ದನು. ಕೊನೆಗೆ ರಾತ್ರಿ ಎಂಟು ಘಂಟೆಯ ನಂತರ ಮನೆಗೆ ಹಿಂದಿರುಗಿ ಊಟ ಮಾಡುತ್ತಿದ್ದನು ಮತ್ತು ತನ್ನ ಪತ್ನಿಯೊಡನೆ ಸದ್ವಿಚಾರವಾಗಿ ಮಾತುಕತೆ ನಡೆಸಿ ಹತ್ತು ಘಂಟೆಗೆ

ಮಲಗಿಕೊಳ್ಳುತ್ತಿದ್ದನು. ಅವನ ಸಾಧ್ವೀ ಧರ್ಮಪತ್ನಿಯೂ ಎರಡು ಹೊತ್ತು ಪತಿಗೆ ಭೋಜನ ಮಾಡಿಸಿ ತಾನು ಭೋಜನ ಮಾಡುತ್ತಿದ್ದಳು ಮತ್ತು ಪ್ರತಿದಿವಸವೂ ಪತಿಗೆ ನಮಸ್ಕಾರ ಮಾಡವುದು, ಆತನ ಸೇವೆ-ಶುಶ್ರೂಷೆ ಮಾಡುವುದು, ಅವನ ಆಜ್ಞೆಯನ್ನು ಪಾಲಿಸುವುದು ಹಾಗೂ ಈಶ್ವರನ ಭಜನೆ-ಧ್ಯಾನ ಮಾಡುವುದು ಇವುಗಳನ್ನು ತನ್ನ ಪರಮ ಧರ್ಮ ಮತ್ತು ಕರ್ತವ್ಯವೆಂದು ತಿಳಿದುಕೊಳ್ಳುತ್ತಿದ್ದಳು. ಈ ಪ್ರಕಾರ ಇಬ್ಬರ ಸಮಯ ಕಳೆಯುತ್ತಿತ್ತು. ಪ್ರತಿ ದಿನವೂ ಖರ್ಚು ಆಗುತ್ತಲೇ ಇತ್ತು. ಕೆಲವು ದಿನಗಳಲ್ಲಿ ಅವರ ಹತ್ತಿರವಿದ್ದ ಅಲ್ಪ ಸ್ವಲ್ಪ ಹಣವೆಲ್ಲಾ ಮುಗಿದು ಹೋಯಿತು. ಪತ್ನಿಯು ಯಜಮಾನರೊಡನೆ ಹೇಳಿದಳು –'ಹಣವೆಲ್ಲಾ ಪೂರ್ತಿ ಮುಗಿದು ಹೋಯಿತು' ಪತಿಯು ಕೇಳಿದನು – 'ಏನು ಒಡವೆ ವಸ್ತ್ರಗಳೆಲ್ಲಾ ಮುಗಿದು ಹೋದುವೇ?' ಪತ್ನಿಯು ಹೇಳಿದಳು–'ಇಲ್ಲಾ' ಆಗ ಬ್ರಾಹ್ಮಣ ಸ್ತ್ರೀ ಯೋಚಿಸಿದಳು– ಇನ್ನು, ಒಡವೆ ವಸ್ತ್ರಗಳಿಂದ ಗೃಹಕೃತ್ಯ ನಡೆಸಬೇಕೆಂದು ಸ್ವಾಮಿಯವರ ಸಮ್ಮತಿ. ಆದುದರಿಂದ ಆಕೆ ಅವುಗಳನ್ನು ಮಾರಿ ಗೃಹಕೃತ್ಯ ನಡೆಸಲು ತೊಡಗಿದಳು. ಆದರೆ ಅವೂ ಕೂಡಾ ಎಷ್ಟು ದಿನಕ್ಕಾದಾವು. ಅವೂ ಮುಗಿದವು. ಪುನಃ ಒಂದು ದಿವಸ ಪತ್ನಿಯು ಹೇಳಿದಳು–'ಒಡವೆ ವಸ್ತ್ರಗಳೆಲ್ಲಾ ಮುಗಿದು ಹೋದುವು' ಪತಿಯು ಹೇಳಿದನು–'ಚಿಂತೆಯಿಲ್ಲ, ಇನ್ನೂ ಪಾತ್ರೆ-ಪದಾರ್ಥಗಳು ಇದ್ದೇ ಇವೆ'. ಇನ್ನು ಸ್ವಾಮಿಯವರಿಗೆ ಮನೆ ಮತ್ತು ಪಾತ್ರೆಗಳಿಂದ ಗೃಹಕೃತ್ಯ ನಡೆಸುವಂತೆ ಒಪ್ಪಿಗೆಯಿದೆ ಎಂದು ಬ್ರಾಹ್ಮಣ ಸ್ತ್ರೀಯು ತಿಳಿದುಕೊಂಡಳು. ಆಕೆಯು ಸಂತೋಷದಿಂದ ಮನೆಯನ್ನು ಮಾರಿದಳು ಮತ್ತು ಅವರು ಬೇರೆ ಬಾಡಿಗೆ ಮನೆಗೆ ಹೋದರು. ಕೆಲವು ದಿವಸ ಇದರಿಂದ ಜೀವನ ಜರುಗಿತು. ಅನಂತರ ಪಾತ್ರೆ ಪದಾರ್ಥಗಳನ್ನೂ ಮಾರಿದರು, ಆದರೆ ಅದರಿಂದ ಏನಾದೀತು. ಕೊನೆಯಲ್ಲಿ ಆಕೆಯ ಹತ್ತಿರ ಮೈ ಮುಚ್ಚಿಕೊಳ್ಳಲು ಒಂದು ಸೀರೆ ಉಳಿಯಿತು. ಬ್ರಾಹ್ಮಣನಿಗೆ ಒಂದು ಪಂಚೆ ಮತ್ತು ಒಂದು ಅಂಗವಸ್ತ್ರ ಉಳಿಯಿತು. ಒಂದು ದಿನ ಬ್ರಾಹ್ಮಣ ಪ್ರಾತಃಕಾಲ ನಾಲ್ಕು ಘಂಟೆಗೆ ಕಾಡಿನಲ್ಲಿ ಹೊರಟಾಗ ಪತ್ನಿಯು ಬಹುವಿನಯದಿಂದ ಕೈಜೋಡಿಸಿಕೊಂಡು ಹೇಳಿಕೊಂಡಳು–'ಸ್ವಾಮಿ! ಈಗ ಇದ್ದುದೆಲ್ಲವೂ ಮುಗಿದು ಹೋಯಿತು.

ಮನೆಯಾದರೋ ಈಗ ಬಾಡಿಗೆಯದು, ಪಾತ್ರೆ ಪದಾರ್ಥಗಳೆಲ್ಲವೂ ಪೂರ್ತಿಯಾಗಿ ಮುಗಿದು ಹೋದುವು. ಕೇವಲ ನಿಮ್ಮ ಈ ಗೀತೆಯ ಪುಸ್ತಕ, ಪಂಚೆ, ವಲ್ಲಿ ಮತ್ತು ನನ್ನೀ ಒಂದು ಸೀರೆ ಉಳಿದಿವೆ. ಈ ದಿನದ ಊಟಕ್ಕೆ ಮನೆಯಲ್ಲಿ ದವಸ–ಧಾನ್ಯವೇನೂ ಇಲ್ಲ. ಇದ್ದುದೆಲ್ಲಾ ನಿನ್ನೆಗೇ ಮುಗಿಯಿತು. ಬ್ರಾಹ್ಮಣನು ಏನೂ ಉತ್ತರ ಕೊಡಲಿಲ್ಲ ಮತ್ತು ಅವನು ಎಂದಿನಂತೆ ಕಾಡಿನ ಕಡೆಗೆ ಹೋದನು.

ಎಂದಿನ ಹಾಗೆಯೇ ಪಂಡಿತನು ಕೆರೆಗೆ ಹೋಗಿ ಶೌಚ–ಸ್ನಾನಾದಿಗಳನ್ನು ಮುಗಿಸಿ ಸಂಧ್ಯಾ–ಗಾಯತ್ರೀ ಜಪ ಇತ್ಯಾದಿ ನಿತ್ಯ ಕರ್ಮಗಳನ್ನು ಮಾಡಿದನು. ನಂತರ ಅವನು ಗೀತಾಪಾರಾಯಣವನ್ನು ಪ್ರಾರಂಭಿಸಿದಾಗ ಅವನ ಮುಂದೆ ತನಗಿಷ್ಟವಾದ ಶ್ಲೋಕ ಬಂತು.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಆ ದಿವಸ ಪಂಡಿತನು ಈ ಶ್ಲೋಕವನ್ನು ಓದಿ ಬೆಚ್ಚಿಬಿದ್ದನು ಮತ್ತು ಇದನ್ನು ಓದುತ್ತಾ ಮನಸ್ಸಿನಲ್ಲಿಯೇ ಯೋಚಿಸಿದ–'ಈ ಶ್ಲೋಕದಲ್ಲಿ ಭಗವಂತನ ವಚನಗಳಿಲ್ಲ, ಬಹುಶಃ ಆ ಮೇಲೆ ಸೇರ್ಪಡೆಯಾಗಿರಬಹುದು, ಎಂದು ಗೊತ್ತಾಗುತ್ತದೆ. ಇದು ಭಗವಂತನ ಮಾತಾಗಿದ್ದರೆ, ಭಗವಂತನು ನನ್ನ ವ್ಯವಸ್ಥೆಯನ್ನು ಮಾಡುತ್ತಿರಲಿಲ್ಲವೇ? ನಾನೇನೋ ಆತನನ್ನೇ ಸಂಪೂರ್ಣವಾಗಿ ಅವಲಂಬಿಸಿದ್ದೇನೆ. ಆತನು ಇಂದಿನವರೆಗೂ ನನ್ನನ್ನು ಸ್ವಲ್ಪವೂ ಜ್ಞಾಪಿಸಿಕೊಂಡಂತಿಲ್ಲ.' ಹೀಗೆ ತಿಳಿದುಕೊಂಡು ಬ್ರಾಹ್ಮಣನು ಆ ಶ್ಲೋಕದ ಮೇಲೆ ಮುಷ್ಕರ ಹೂಡಿದನು. ಅವನು ಈ ಶ್ಲೋಕವನ್ನು ಬಿಟ್ಟು ಗೀತಾ ಪಾಠದಲ್ಲಿ ತೊಡಗಿದ.

ಬ್ರಾಹ್ಮಣನ ಹೃದಯದ ಈ ಭಾವನೆಯನ್ನು ನೋಡಿ ಸರ್ವ ಹೃದಯೇಶ್ವರ ಭಕ್ತವಾಂಛಿತ ಕಲ್ಪತರು ಭಗವಂತನು ಕೂಡಲೇ ಒಬ್ಬ ವಿದ್ಯಾರ್ಥಿಯ ರೂಪದಲ್ಲಿ ಕುದುರೆ ಸವಾರನಾಗಿ ಬ್ರಾಹ್ಮಣನ ಮನೆಗೆ ಹೋದನು ಮತ್ತು ಆತನ ಧರ್ಮಪತ್ನಿಗೆ ಮಿಠಾಯಿಯ ಒಂದು ತಟ್ಟೆಯನ್ನು ಕಾಣಿಕೆಯಾಗಿ ಕೊಟ್ಟು ಕೇಳಿದನು–'ಗುರುಗಳೆಲ್ಲಿ?'

ಬ್ರಾಹ್ಮಣನ ಪತ್ನಿಯು ಹೇಳಿದಳು–'ಇಲ್ಲಿಂದ ಒಂದು ಮೈಲಿ ದೂರದಲ್ಲಿ ಒಂದು ಕೆರೆಯಿದೆ, ಅವರು ಅಲ್ಲಿಗೆ ಶೌಚ ಸ್ನಾನಾದಿ ನಿತ್ಯ ಕರ್ಮಗಳಿಗಾಗಿ ಪ್ರತಿದಿನವೂ ಹೋಗುತ್ತಾರೆ, ಸುಮಾರು ಹನ್ನೊಂದು ಗಂಟೆಗೆ ಬರುತ್ತಾರೆ, ಈಗಿನ್ನೂ ಹತ್ತು ಗಂಟೆ, ಅವರು ಬರುವುದಕ್ಕೆ ಇನ್ನೂ ಒಂದು ಗಂಟೆ ಸಮಯವಿದೆ. ತಾವು ಯಾರು ಮತ್ತು ಈ ಮಿಠಾಯಿಯನ್ನು ಏತಕ್ಕಾಗಿ ತಂದಿರುವಿರಿ?' ವಿದ್ಯಾರ್ಥಿಯು ಉತ್ತರ ವಿತ್ತನು–'ನಾನು ಪಂಡಿತರ ಶಿಷ್ಯ ಮತ್ತು ಗುರುಗಳ ಹಾಗೂ ನಿಮ್ಮ ಸೇವೆಗಾಗಿ ಈ ಮಿಠಾಯಿಯನ್ನು ತಂದಿರುವೆನು. ಇದನ್ನು ನೀವು ಇಟ್ಟುಕೊಳ್ಳಿರಿ.' ಬ್ರಾಹ್ಮಣನ ಪತ್ನಿಯು ಹೇಳಿದಳು–'ಪಂಡಿತರು ಯಾರನ್ನೂ ಶಿಷ್ಯರನ್ನಾಗಿ ಮಾಡಿಕೊಳ್ಳುವುದೂ ಇಲ್ಲ ಮತ್ತು ಯಾರಾದರೂ ಕೊಟ್ಟ ವಸ್ತುವನ್ನೂ ಸ್ವೀಕರಿಸಕೂಡದೆಂದು ಆಜ್ಞೆಮಾಡಿದ್ದಾರೆ. ಆದುದರಿಂದ ನಾನು ಬೇರೆಯವರು ಕೊಟ್ಟವಸ್ತುವನ್ನು ತೆಗೆದುಕೊಳ್ಳಲಾರೆ. ಇದನ್ನು ನೀವು ತೆಗೆದುಕೊಂಡು ಹೋಗಿ.' ವಿದ್ಯಾರ್ಥಿಯು ಹೇಳಿದನು–'ನೀವು ಹೇಳಿದಂತೆಯೇ ನಾನು ಒಪ್ಪಿಕೊಳ್ಳುತ್ತೇನೆ. ಅವರು ಯಾರನ್ನೂ ಸಹ ಶಿಷ್ಯರನ್ನಾಗಿ ಮಾಡಿಕೊಳ್ಳುವುದಿಲ್ಲ. ಈ ಮಾತೂ ನಿಜವೇ. ನನ್ನನ್ನು ಬಿಟ್ಟು ಅವರು ಯಾರನ್ನೂ ಶಿಷ್ಯರನ್ನಾಗಿ ಮಾಡಿಕೊಂಡಿಲ್ಲ ಮತ್ತು ಮಾಡಿಕೊಳ್ಳುವುದೂ ಇಲ್ಲ. ನನ್ನ ಮೇಲೆ ಅವರಿಗೆ ವಿಶೇಷವಾದ ಕೃಪೆಯಿದೆ, ಆದ್ದರಿಂದಲೇ ಅವರು ನನ್ನನ್ನು ಶಿಷ್ಯನೆಂದು ಭಾವಿಸಿದ್ದಾರೆ. ಕೇವಲ ನಾನೊಬ್ಬನೇ ಅವರ ಶಿಷ್ಯನಾಗಿದ್ದೇನೆ, ಅದಕ್ಕೋಸ್ಕರ ನಾನು ನಿಮಗೆ ನಂಬಿಕೆ ಕೊಡುತ್ತಿದ್ದೇನೆ.' ಬ್ರಾಹ್ಮಣನ ಪತ್ನಿ ಹೇಳಿದಳು–'ಅವರು ನಿಮ್ಮನ್ನು ಶಿಷ್ಯರನ್ನಾಗಿ ಮಾಡಿರುವುದನ್ನು ನಾನು ಯಾವಾಗಲೂ ಕೇಳಿಲ್ಲ, ಅವರು ಯಾರನ್ನೂ ಶಿಷ್ಯರನ್ನಾಗಿ ಮಾಡಿಯೇ ಇಲ್ಲ ಎಂಬುದನ್ನು ನಾನು ತಿಳಿದಿದ್ದೇನೆ. ಅಂದಮೇಲೆ ನೀವು ಅವರ ಶಿಷ್ಯರೆಂಬ ಈ ಮಾತನ್ನು ಹೇಗೆ ಒಪ್ಪಲಿ. ಏನೇ ಆಗಲಿ, ನಾನು ಈ ಮಿಠಾಯಿಯನ್ನು ಯಾವ ರೀತಿಯಿಂದಲೂ ಸ್ವೀಕರಿಸಲಾರೆ. ಪಂಡಿತರು ಬಂದ ನಂತರ ನೀವು ಅವರಿಗೆ ಕೊಡಬಹುದು.' ವಿದ್ಯಾರ್ಥಿಯು ಹೇಳಿದನು– 'ಒಳ್ಳೆಯದು, ಈ ತಟ್ಟೆ ಇಲ್ಲಿಯೇ ಇರಲಿ ಮತ್ತು ನನ್ನ ಕುದುರೆಯೂ ಇಲ್ಲಿಯೇ ಇರಲಿ. ನಾನು ಪುನಃ ಬಂದು ಪಂಡಿತರನ್ನು ಕಾಣುತ್ತೇನೆ.' ಅದಕ್ಕೆ ಬ್ರಾಹ್ಮಣನ ಪತ್ನಿಯು ಉತ್ತರವಿತ್ತಳು–'ನೀವು ಈ ತಟ್ಟೆಯನ್ನು ಹಿಂದಕ್ಕೆ ತೆಗೆದುಕೊಂಡು

ಹೋಗಿ, ಪಂಡಿತರು ಬಂದಮೇಲೆ ನೀವು ಪುನಃ ತೆಗೆದುಕೊಂಡು ಬರಬಹುದು. ನಾನು ಪಂಡಿತರ ಅಪ್ಪಣೆಯಿಲ್ಲದೆ ಇದನ್ನು ತೆಗೆದಿಟ್ಟುಕೊಳ್ಳಲಾರೆ.' ಆದರೆ ಆ ಭಗವಂತನು ವಿಚಿತ್ರನಾದವನು. ಆತನು ತಟ್ಟೆಯನ್ನು ಅಲ್ಲಿಯೇ ಬಿಟ್ಟು ಹೊರಟುಹೋದನು. ಹೊರಟಾಗ ಬ್ರಾಹ್ಮಣನ ಪತ್ನಿಯು ಕೇಳಿದಳು–'ನಿಮ್ಮ ಹೆಸರು ವಿಳಾಸವನ್ನಾದರೂ ತಿಳಿಸಿರಿ, ಪಂಡಿತರು ಬಂದ ನಂತರ ಈ ಮಿಠಾಯಿಯ ತಟ್ಟೆಯನ್ನು ನಿಮ್ಮ ಮನೆಗೆ ತಲುಪಿಸಲು.' ವಿದ್ಯಾರ್ಥಿಯು ಹೇಳಿದನು–'ಅವರಿಗೆ ನನ್ನ ಪರಿಚಯವಿದೆ. ಅವರಿಗೆ ನನ್ನ ಮೇಲೆ ಅತ್ಯಂತ ಕೃಪೆಯಿದೆ, ಏಕೆಂದರೆ, ನಾನೊಬ್ಬನೇ ಅವರ ಶಿಷ್ಯ. ನಾನಲ್ಲದೆ ಬೇರೆಯಾವ ಶಿಷ್ಯರೂ ಇಲ್ಲವೇ ಇಲ. ಈ ದಿನ ಬೆಳಿಗ್ಗೆ ಯಾರ ಮುಖದ ಮೇಲೆ ನೀವು ಮುಷ್ಕರ ಹೂಡಿದ್ದಿರೋ, ಅದೇ ಶಿಷ್ಯ ಬಂದಿದ್ದನೆಂದು ನೀವು ಹೇಳಿಬಿಡಿ, ಅದರಿಂದ ಅವರು ತಿಳಿದುಕೊಳ್ಳುವರು.' ಇಷ್ಟನ್ನು ಹೇಳಿ ಭಗವಂತನು ಹೊರಟು ಹೋದನು.

ಒಂದು ಗಂಟೆಯ ನಂತರ ಪಂಡಿತನು ಬಂದನು. ಮನೆಯೊಳಗೆ ಪ್ರವೇಶಿಸಿದ ಕೂಡಲೇ ಒಂದು ತಟ್ಟೆಯ ತುಂಬಾ ಮಿಠಾಯಿಯಿರುವುದನ್ನು ನೋಡಿದನು. ಪಂಡಿತನು ಕೊಂಚ ಉದ್ವೇಗದಿಂದ ಕೇಳಿದನು–''ಈ ಮಿಠಾಯಿ ಎಲ್ಲಿಂದ ಬಂತು, ಯಾರು ಕೊಟ್ಟರು ಮತ್ತು ಏಕೆ ಇಲ್ಲಿ ಇಟ್ಟಿದೆ? ಪತ್ನಿಯು ಕೈಜೋಡಿಸಿಕೊಂಡು ವಿನಯದಿಂದ ಉತ್ತರ ಕೊಟ್ಟಳು–'ಸ್ವಾಮಿ! ನಾನು ಇಟ್ಟಿಲ್ಲ. ಒಬ್ಬ ವಿದ್ಯಾರ್ಥಿಯು ಬಲವಂತವಾಗಿ ಇಟ್ಟುಹೋದನು. ಅವನು ಹೇಳುತ್ತಿದ್ದ–'ನಾನು ಗುರುಗಳ ಸೇವೆಗಾಗಿ ತಂದಿದ್ದೇನೆ. ಆಗಲೂ ನಾನು ತೆಗೆದುಕೊಳ್ಳಲಿಲ್ಲ. ಆದರೆ ಅವನೇ ಬಲವಂತವಾಗಿ ಬಿಟ್ಟು ಹೊರಟುಹೋದನು.' ಬ್ರಾಹ್ಮಣನು ಹೇಳಿದನು–'ನಾನು ಇಂದಿನವರೆಗೂ ಯಾರನ್ನೂ ಶಿಷ್ಯನಾಗಿ ಮಾಡಿಲ್ಲ ಮತ್ತು ಮಾಡುವುದೂ ಇಲ್ಲ ಎಂಬುದು ನಿನಗೆ ತಿಳಿದೇ ಇದೆ.' ಪತ್ನಿಯು ಹೇಳಿದಳು–'ಇದು ನಿಜ. ನಾನೂ ಅದನ್ನೇ ಹೇಳಿದೆ.' ಅದಕ್ಕೆ ಅವನು ನನ್ನ ಆ ಮಾತನ್ನು ಸಮರ್ಥಿಸುತ್ತಾ ಹೇಳಿದನು–'ಈ ವಿಚಾರ ನನಗೂ ಗೊತ್ತು. ಗುರುಗಳು ನನ್ನನ್ನು ಬಿಟ್ಟು ಯಾರನ್ನೂ ಶಿಷ್ಯರನ್ನಾಗಿ ಮಾಡಿಲ್ಲ ಮತ್ತು ಮಾಡುವುದೂ ಇಲ್ಲ. ನಾನೊಬ್ಬನೇ ಅವರ ಏಕಮಾತ್ರ ಶಿಷ್ಯನಾಗಿದ್ದೇನೆ.

ನನ್ನ ಮೇಲೆ ಅವರಿಗೆ ವಿಶೇಷವಾದ ದಯೆಯಿದೆ. ಆದುದರಿಂದ ನನ್ನನ್ನು ಅವರು ಶಿಷ್ಯನಾಗಿ ಸ್ವೀಕಾರ ಮಾಡಿದ್ದಾರೆ. ಈ ನನ್ನ ಮಾತನ್ನು ನಿಜವೆಂದು ಭಾವಿಸಿ, ನಾನು ಭರವಸೆ ಕೊಡುತ್ತೇನೆ. ಅದಕ್ಕೂ ನಾನು ಹೀಗೆ ಹೇಳಿದೆನು.

'ಅವರು ನಿಮ್ಮನ್ನು ಶಿಷ್ಯನನ್ನಾಗಿ ಮಾಡಿದ್ದಾರೆಂಬುದನ್ನು ನಾನು ಯಾವಾಗಲೂ ಕೇಳಿಲ್ಲ. ಏನೇ ಆಗಲಿ, ನಾನು ಅವರ ಅಪ್ಪಣೆಯಿಲ್ಲದೆ ಈ ಕಾಣಿಕೆಯನ್ನು ಇಟ್ಟುಕೊಳ್ಳಲಾರೆ, ಆದರೆ ಅವನು ಇಟ್ಟು ಹೊರಟು ಹೋದನು.' ಪಂಡಿತನು ಹೇಳಿದನು 'ಅವನ ಹೆಸರು, ವಿಳಾಸವನ್ನಾದರೂ ಕೇಳಬೇಕಾಗಿತ್ತು. ಅದರಿಂದ ಅವನ ಮನೆಗೆ ಅವನ ವಸ್ತುವನ್ನು ಹಿಂದಿರುಗಿಸಬಹುದಾಗಿತ್ತು.' ಪತ್ನಿಯು ಹೇಳಿದಳು–'ನಾನು ಕೇಳಿದಾಗ ಗುರುಗಳಿಗೆ ನಾನು ಗೊತ್ತು, ಇಂದು ಬೆಳಗ್ಗೆ ತಾನೇ ಅವರು ನನ್ನ ಮುಖದ ಮೇಲೆ ಮುಷ್ಕರ ಹೂಡಿದ್ದಾರೆ, ನನ್ನನ್ನು ಇಷ್ಟು ಹೊತ್ತಿಗೆ ಮರೆತುಬಿಡುವರೇ? ಯಾರ ಮುಖದ ಮೇಲೆ ಇಂದು ಪ್ರಾತಃಕಾಲ ಮುಷ್ಕರ ಹೂಡಿದ್ದಿರೋ, ಅವನೇ ನಮ್ಮ ಏಕ ಮಾತ್ರ ಆ ಶಿಷ್ಯನು ಕಾಣಿಕೆ ಕೊಟ್ಟು ಹೋದನೆಂದು ನೀವೇ ತಿಳಿಸಿರಿ. ಸರಿ, ಇಷ್ಟನ್ನು ಹೇಳಿ ಮಿಠಾಯಿಯ ತಟ್ಟೆ ಇಲ್ಲೇ ಇಟ್ಟು ತನ್ನ ಕುದುರೆಯನ್ನೂ ಇಲ್ಲಿಯೇ ಬಿಟ್ಟು, ನಾನು ಪುನಃ ಬಂದು ಗುರುಗಳನ್ನು ಕಾಣುತ್ತೇನೆ ಎಂದು ಹೇಳಿ ಹೊರಟುಹೋದನು.

ಇದನ್ನು ಕೇಳಿದ ಕೂಡಲೇ ಪಂಡಿತನಿಗೆ ರೋಮಾಂಚನವಾಯಿತು ಮತ್ತು ಅವನು ಗದ್ಗದಿತನಾಗಿ ಹೇಳಿದನು–'ಸಾಧ್ವೀ! ನೀನೇ ಧನ್ಯಳು. ಆತ ಸಾಕ್ಷಾತ್ ಭಗವಂತನಾಗಿದ್ದ, ನಿನ್ನ ಸೌಭಾಗ್ಯ ಬಹಳ ದೊಡ್ಡದು. ಏಕೆಂದರೆ ನಿನಗೆ ಆತನ ಸಾಕ್ಷಾತ್ ದರ್ಶನವಾಯಿತು. ನಾನು ಅವಿಶ್ವಾಸೀ ಮತ್ತು ಹತಭಾಗ್ಯನಾದೆನು, ಆದುದರಿಂದ ಆತನು ನನಗೆ ದರ್ಶನ ಕೊಡಲಿಲ್ಲ, ನಾನು ಒಂದು ದಿವಸವೂ ಹಸಿವನ್ನು ಅನುಭವಿಸಲಿಲ್ಲ ಮತ್ತು ಗಾಬರಿಯಿಂದ ಭಗವಂತನ ವಚನಗಳ ಮೇಲೆ ಮುಷ್ಕರ ಹೂಡಿಬಿಟ್ಟೆನು. ಗೀತೆಯು ಸ್ವತಃ ಭಗವಂತನ ಮುಖದಿಂದ ಹೊರಟಿದೆ, ಅದರ ಮೇಲೆ ಮುಷ್ಕರ ಹೂಡುವುದು ನಿಜವಾಗಿಯೂ ಭಗವಂತನ ಮುಖದ ಮೇಲೆಯೇ ಮುಷ್ಕರ ಹೂಡಿದಂತೆಯೇ ಇದೆ. ಈ ದಿವಸ ಗೀತಾ ಪಾರಾಯಣ ಮಾಡುತ್ತಿರುವಾಗ ಈ ಶ್ಲೋಕ ಬಂದಿತು–

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಆಗ ಅವಿಶ್ವಾಸಿಯಾದ ನನ್ನ ಮನಸ್ಸಿನಲ್ಲಿ ಭಗವಂತನ ವಚನಗಳ ಬಗ್ಗೆ ಸಂಶಯವುಂಟಾಯಿತು. 'ನಿಜವಾಗಿಯೂ ಇವು ಭಗವಂತನ ವಾಕ್ಯಗಳೇ ಆಗಿದ್ದರೆ ಆತನು ನಿಶ್ಚಯವಾಗಿಯೂ ನನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದನು. ಇದು ಹೊಸದಾಗಿ ಸೇರಿಕೊಂಡಿರುವ ಅಂಶವಾಗಿದೆ. ಹೀಗೆ ಯೋಚಿಸಿ ನಾನು ಆತನ ಮೇಲೆ ಮುಷ್ಕರ ಹೂಡಿದೆ. ನಾನು ದೊಡ್ಡ ನೀಚ, ಪಾಪಿ ಮತ್ತು ಅವಿಶ್ವಾಸಿಯಾದೆ. ನನ್ನ ಹೃದಯದಲ್ಲಿ ಕಿಂಚಿತ್ತಾದರೂ ಧೈರ್ಯವಿದ್ದರೆ, ನಾನು ಇಂತಹ ನೀಚ ಕೆಲಸವನ್ನು ಎಂದಿಗೂ ಮಾಡುತ್ತಿರಲಿಲ್ಲ. ಆ ಪರಮ ದಯಾಳು ಭಗವಂತನು ಯಾವಾಗಲೂ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾ ಇರುತ್ತಾನೆ. ಸರ್ವಸ್ವವೂ ಸಮಾಪ್ತಿಗೊಂಡಾಗಲೇ ಬಂದಿರುತ್ತಾನೆ. ಮುಷ್ಕರ ಹೂಡಿದ ಅಪರಾಧದ ಕಾರಣದಿಂದ ನಾನು ಆತನ ದರ್ಶನದಿಂದ ವಂಚಿತನಾಗಿದ್ದೇನೆ. ನೀನು ಶುದ್ಧ ಮತ್ತು ಅನನ್ಯ ಭಕ್ತಳು ಹಾಗೂ ಪತಿವ್ರತೆ. ಆದುದರಿಂದ ನಿನಗೆ ದರ್ಶನವಿತ್ತು ಹೋದನು. ಈಗ ಆತನು ಬರುವವರೆಗೂ ನನಗೆ ನೆಮ್ಮದಿಯಿಲ್ಲ, ಸೌಖ್ಯವಿಲ್ಲ' ಅನಂತರ ಅವನ ದೃಷ್ಟಿ ಹೊರಗಡೆ ಹೋಯಿತು. ಕುದುರೆಯ ಮೇಲೆ ಭಾರ ಹೇರಿರುವುದು ಕಂಡಿತು. ಅವನು ಕೂಡಲೇ ಹೋಗಿ ಭಾರವನ್ನು ಇಳಿಸಿ ಅದನ್ನು ಒಳಗಡೆ ತಂದು ನೋಡಿದನು. ಅದರಲ್ಲಿ ಲಕ್ಷಾಂತರ ರೂಪಾಯಿಗಳ ರತ್ನ ತುಂಬಿತ್ತು. ಬ್ರಾಹ್ಮಣ ಇದನ್ನು ನೋಡಿ ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟನು. ಆತ ಪುನಃ ಗದ್ಗದನಾಗಿ ಪ್ರೇಮದಲ್ಲಿ ತನ್ಮಯತೆಯಿಂದ ಭಾಗವತದ ಈ ಶ್ಲೋಕವನ್ನು ಹಾಡಲಾರಂಭಿಸಿದನು–

**ಅಹೋ ಬಕೀ ಯಂ ಸ್ತನಕಾಲಕೂಟಂ**
**ಜಿಘಾಂಸಯಾಪಾಯಯದಪ್ಯಸಾಧ್ವೀ ।**
**ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ**
**ಕಂ ವಾ ದಯಾಳುಂ ಶರಣಂ ವ್ರಜೇಮ ॥**

(ಶ್ರೀಮದ್ಭಾ. ೩/೨/೨೩)

ಆಶ್ಚರ್ಯದ ಮಾತೆಂದರೆ ಪಾಪಿಯಾದ ಪೂತನಿಯು ಶ್ರೀಕೃಷ್ಣನನ್ನು ಕೊಲ್ಲಲು ಅವನಿಗೆ ತನ್ನ ಸ್ತನಗಳಲ್ಲಿನ ವಿಷವನ್ನು ಉಣಿಸಿದಳು, ಅವಳೂ ತಾಯಿಗೆ ಯೋಗ್ಯವಾದ ಉತ್ತಮ ಗತಿಯನ್ನು ಪಡೆದಳು, ಅಂದ ಮೇಲೆ ಆ ಭಗವಂತನನ್ನು ಬಿಟ್ಟು ನಾವು ಮತ್ತೆ ಯಾವ ದಯಾಳುವಿಗೆ ಶರಣಾಗುವುದು.

ಇಂತಹ ದೀನಬಂಧು, ಪತಿತಪಾವನ, ಎಲ್ಲರನ್ನೂ ಪೋಷಿಸುವ ವಿಶ್ವಂಭರ ಪ್ರಭುವಿನ ಮೇಲೆ ನಾನು ಸುಳ್ಳು ದೋಷಾರೋಪವನ್ನು ಮಾಡಿ ನನ್ನನ್ನು ಕಳಂಕಿತನನ್ನಾಗಿ ಮಾಡಿಕೊಂಡೆ. ನಾನು ಅರ್ಥ(ಹಣ)ದ ದಾಸನಾದೆನು. ನಾನು ನಿಜವಾಗಿಯೂ ಪ್ರಭುವಿನ ದಾಸನಾಗಿದ್ದರೆ ನನಗೆ ಅನ್ನವಸ್ತ್ರಾದಿಗಳ ಚಿಂತೆಯೇಕಿರುತ್ತಿತ್ತು ಮತ್ತು ಭಗವಂತನು ನನ್ನನ್ನು ತೃಪ್ತಿಪಡಿಸುವುದಕ್ಕಾಗಿ ಈ ರತ್ನ-ರಾಶಿಯನ್ನು ಏಕೆ ಕೊಟ್ಟು ಹೋಗುತ್ತಿದ್ದನು? ನಾನು ವಾಸ್ತವವಾಗಿಯೂ ಭಗವಂತನ ತತ್ತ್ವ-ರಹಸ್ಯವನ್ನು ತಿಳಿದುಕೊಂಡಿದ್ದರೆ, ನನಗೆ ಆತನಲ್ಲಿ ನಿಜವಾದ ಪ್ರೇಮವಿದ್ದರೆ ಮತ್ತು ನನ್ನ ಮನಸ್ಸಿನಲ್ಲಿ ಹಣದ ಆಸೆ ಇಲ್ಲದಿದ್ದರೆ ಆತನು ನನಗೆ ಈ ರತ್ನವನ್ನು ಕೊಟ್ಟು ಏಕೆ ಮರುಳುಗೊಳಿಸುತ್ತಿದ್ದನು.' ಹೀಗೆ ಹೇಳುತ್ತಾ ಹೇಳುತ್ತಾ ಬ್ರಾಹ್ಮಣ ಆನಂದಮುಗ್ಧನಾಗಿ ಹೋದನು.

ಬಹಳ ಹೊತ್ತಾದುದರಿಂದ ಬ್ರಾಹ್ಮಣನ ಪತ್ನಿಯು ಹೇಳಿದಳು-'ಭಗವಂತ ಕೊಟ್ಟಿರುವ ಪ್ರಸಾದವನ್ನಾದರೂ ತೆಗೆದುಕೊಳ್ಳಿ.' ಪಂಡಿತನು ಹೇಳಿದನು-'ನಾನು ಪುನಃ ಬರುವೆನೆಂದು ಭಗವಂತನೇ ಹೇಳಿ ಹೋಗಿರುವಾಗ, ಈಗ ನಾನು ಆತನು ಬಂದ ಮೇಲೆಯೇ ಪ್ರಸಾದವನ್ನು ತೆಗೆದುಕೊಳ್ಳುವೆನು.' ಸಾಯಂಕಾಲವಾಯಿತು, ಆದರೆ ಭಗವಂತ ಬರಲೇ ಇಲ್ಲ, ಆಗ ಪತ್ನಿಯು ಪುನಃ ಹೇಳಿದಳು-

'ಈಗಲಾದರೂ ಸ್ವಲ್ಪ ಪ್ರಸಾದ ಸ್ವೀಕರಿಸಬಾರದೇ?' ಪಂಡಿತನು ಒಪ್ಪುವನೇ, ಅವನು ಪುನಃ ಅದೇ ಮಾತನ್ನು ಹೇಳಿಬಿಟ್ಟನು. ಆಗ ರಾತ್ರಿ ಹತ್ತು ಘಂಟೆ, ಮಲಗುವ ಸಮಯವಾಯಿತು. ಭಗವಂತ ಬರಲಿಲ್ಲ, ಆಗ ಪತ್ನಿಯು ಮತ್ತೆ ವಿನಯದಿಂದ ಹೇಳಿದಳು-'ಪ್ರಸಾದವನ್ನಾದರೂ ತೆಗೆದುಕೊಳ್ಳಿರಿ.' ಆದಾಗ್ಯೂ ಸಹ ಆತ ಪ್ರಸಾದವನ್ನು ತೆಗೆದುಕೊಳ್ಳಲಿಲ್ಲ ಮತ್ತು ಇಬ್ಬರೂ ಏನನ್ನೂ ತಿನ್ನದೇ ಹಾಗೆಯೇ ಮಲಗಿದರು.

ರಾತ್ರಿ ಹನ್ನೊಂದು ಘಂಟೆ. ಬಾಗಿಲನ್ನು ತಟ್ಟುತ್ತಾ ಯಾರೋ ಬಹು ಮಧುರ ಸ್ವರದಿಂದ ಕೂಗಿದರು–'ಗುರುಪತ್ನಿಯವರೇ! ಗುರುಪತ್ನಿಯವರೇ! ಬಾಗಿಲು ತೆರೆಯಿರಿ.' ಬ್ರಾಹ್ಮಣ ದಂಪತಿಗಳಿಗೆ ಇನ್ನೂ ನಿದ್ರೆ ಬಂದೇ ಇರಲಿಲ್ಲ. ಸುಮಧುರ ಸ್ವರ ಹಾಗೂ 'ಗುರುಪತ್ನಿಯವರೇ' ಎಂಬ ಸಂಬೋಧನೆಯನ್ನು ಕೇಳಿ ಬ್ರಾಹ್ಮಣನ ಪತ್ನಿ ಬೆಚ್ಚಿದಳು ಮತ್ತು ಆನಂದ ವಿಹ್ವಲಳಾಗಿ ಹೇಳಿದಳು–'ಸ್ವಾಮಿ! ಅಗೋ, ನಿಮ್ಮ ಭಗವಂತನು ಬಂದೇ ಬಿಟ್ಟನು. ಬ್ರಾಹ್ಮಣನು ಕೂಡಲೇ ಓಡಿಹೋಗಿ ಬಾಗಿಲು ತೆರೆದನು ಮತ್ತು ಆ ಭಗವಂತನ ಚರಣಗಳಿಗೆ ಎರಗಿದನು. ಭಗವಂತನು ಅವನನ್ನು ಎತ್ತಿಕೊಂಡು ತನ್ನ ಹೃದಯಕ್ಕೆ ಅಪ್ಪಿಕೊಂಡನು. ಆ ಸಮಯದಲ್ಲಿ ಪಂಡಿತನ ಸ್ಥಿತಿ ಬಹು ವಿಚಿತ್ರವಾಗಿತ್ತು. ಅವನ ಶರೀರ ರೋಮಾಂಚನಗೊಂಡಿತ್ತು. ಕಣ್ಣುಗಳಿಂದ ಬಾಷ್ಪಾಂಜಲಿ ಧಾರಾಕಾರವಾಗಿ ಹರಿಯುತ್ತಿತ್ತು. ಹೃದಯ ತುಂಬಿಬಂತು ಮತ್ತು ಮಾತು ಗದ್ಗದವಾಯಿತು. ಆದರೂ ಅವನು ಹೇಗೋ ಧೈರ್ಯ ತಂದುಕೊಂಡು ಹೇಳಿದನು–'ನಾಥ! ನಾನಾದರೊ ಒಬ್ಬ ಭೌತಿಕ ಸಂಪತ್ತಿನ ದಾಸನಾಗಿದ್ದೇನೆ. ನನ್ನಂತಹ ಪಾಮರನ ಮೇಲೆಯೂ ನೀನು ಇಷ್ಟೊಂದು ಕೃಪೆ ತೋರಿಸಿರುವೆ, ಇದಕ್ಕೆ ನಿನ್ನ ಪರಮ ಕೃಪಾಳುತನದ ಸ್ವಭಾವವೇ ಕಾರಣ. ನನ್ನ ಭಾವನೆ ಮತ್ತು ಆಚರಣೆಗಳ ಕಡೆಗೆ ನೀನು ಗಮನವಿಟ್ಟಿದ್ದರೆ ನಿನ್ನ ದರ್ಶನ ಅಸಾಧ್ಯವಾಗುತ್ತಿತ್ತು. ನನಗೆ ನರಕದಲ್ಲಿ ಎಲ್ಲಿಯೋ ಆಶ್ರಯ ದೊರೆಯಬೇಕಾಗಿತ್ತು. ನಾನು ನಿನ್ನಂತಹ ಪೂರ್ಣ ನಿರ್ದೋಷಿ ಮಹಾಪುರುಷನ ಮೇಲೆ ದೋಷಾರೋಪಣೆ ಮಾಡಿದೆ. ನಾನು ಆರ್ಥಿಕ ಲಾಭಕ್ಕಾಗಿಯೇ ನಿನ್ನನ್ನು ಭಜಿಸುತ್ತಿದ್ದೆ, ಅದಕ್ಕಾಗಿಯೇನೋ ನೀನು ನನ್ನ ಸಂತೋಷಕ್ಕಾಗಿ ಈ ರತ್ನಗಳನ್ನು ಕೊಟ್ಟಿರುವೆ. ನಾನು ಬಹು ದೊಡ್ಡ ಸಕಾಮೀ ಪುರುಷನಾದೆ, ಇಲ್ಲವಾಗಿದ್ದರೆ ನಾನು ಪಾರಮಾರ್ಥಿಕ ಯೋಗಕ್ಷೇಮದ ಇಚ್ಛೆಯನ್ನೇ ಮಾಡುತ್ತಿದ್ದೆ. ನಿಷ್ಕಾಮ ಭಾವದಿಂದ ಕೇವಲ ನಿನ್ನನ್ನು ಮಾತ್ರ ಅವಲಂಬಿಸಿರುವವರು ಈ ಯೋಗಕ್ಷೇಮವನ್ನೂ ಬಯಸುವುದಿಲ್ಲ. ಆದರೆ ನೀನು ಅವರು ಬಯಸದೇ ಇದ್ದರೂ ಅವರ ಯೋಗಕ್ಷೇಮವನ್ನು ನಿರ್ವಹಿಸುವೆ! ನಿನ್ನಂತಹ ಹೇತುರಹಿತ ಮಹಾಪುರುಷನಲ್ಲಿ ಅನನ್ಯ ಶರಣಾಗಲು ನನ್ನಂತಹ ದೌರ್ಭಾಗ್ಯನಲ್ಲಿ ಅಂತಹ ಶ್ರದ್ಧೆ, ಪ್ರೇಮ, ವಿಶ್ವಾಸ ಮತ್ತು ಅವಲಂಬನೆ ಎಲ್ಲಿದೆ?

ಭಗವಂತ ಹೇಳಿದನು–'ಇದರಲ್ಲಿ ನಿನ್ನ ದೋಷವೇನೂ ಇಲ್ಲ. ನೀನು ನನ್ನನ್ನೇ ಅವಲಂಬಿಸಿದ್ದೆ. ನಾನು ಬರುವುದು ವಿಳಂಬವಾಯಿತು, ಇದು ನನ್ನ ಸ್ವಭಾವಗತ ದೋಷ, ಆದರೆ ಈವರೆವಿಗೂ ನೀನು ಊಟವನ್ನೇಕೆ ಮಾಡಲಿಲ್ಲ?' ಪಂಡಿತನು ಹೇಳಿದನು–'ನಾನು ಪುನಃ ಬಂದು ಕಾಣುವೆನು ಎಂದು ಹೇಳಿಹೋಗಿರುವಾಗ ನೀನು ಬರದೇ ನಾನು ಹೇಗೆ ಊಟಮಾಡಲಿ? ನೀನು ಊಟಮಾಡು, ನಂತರ ನಾವೂ ಸಹ ಪ್ರಸಾದ ಸೇವಿಸುವೆವು. ಭಗವಂತ ಹೇಳಿದನು 'ಇಲ್ಲ–ಇಲ್ಲ ನಡೆಯಿರಿ ನಾವುಗಳೆಲ್ಲಾ ಒಟ್ಟಿಗೇ ಊಟಮಾಡೋಣ.' ಆಗ ಬ್ರಾಹ್ಮಣನ ಪತ್ನಿಯು ಭಗವಂತನ ಸಂಕೇತದಂತೆ ಇಬ್ಬರಿಗೂ ಭೋಜನವನ್ನು ಬಡಿಸಿದಳು. ಬ್ರಾಹ್ಮಣನು ಅತ್ಯಂತ ಪ್ರೇಮವಿಹ್ವಲನಾಗಿ ಪ್ರಸಾದವನ್ನು ಸ್ವೀಕರಿಸಿದನು. ಊಟದ ನಂತರ ಭಗವಂತ ಹೇಳಿದನು–'ನಿನಗೆ ಏನು ಬೇಕೆಂಬ ಇಚ್ಛೆಯುಂಟೋ ಅದನ್ನು ಕೇಳಿಕೋ, ನಿನಗೆ ಯಾವುದೂ ದುರ್ಲಭವಲ್ಲ, ಬ್ರಾಹ್ಮಣನು ಹೇಳಿದನು–'ನೀನೇ ಸ್ವತಃ ದಯ ಮಾಡಿಸಿರುವಾಗ ಇನ್ನೂ ಕೇಳಿಕೊಳ್ಳಲು ಬಾಕಿ ಏನು ಉಳಿದಿದೆ? ನಾಥ ! ನಾನು ಈಗ ಬಯಸುವುದಿಷ್ಟೇ 'ನನ್ನ ಮನಸ್ಸಿನಲ್ಲಿ ಯೋಗಕ್ಷೇಮದ ಇಚ್ಛೆಯೂ ಕೂಡ ಇರದಿರಲಿ ಮತ್ತು ಕೇವಲ ನಿನ್ನಲ್ಲಿಯೇ ನನ್ನ ಮನಸ್ಸು ನೆಲೆಸಿ ಅನನ್ಯ ವಿಶುದ್ಧವಾದ ಪ್ರೇಮವಿರಲಿ' ಭಗವಂತನು 'ತಥಾಸ್ತು' ಎಂದು ಹೇಳಿ ಅದೃಶ್ಯನಾಗಿ ಹೋದನು. ಅನಂತರ ಬ್ರಾಹ್ಮಣ ಪತ್ನಿಯೂ ಸಹ ಪ್ರಸಾದವನ್ನು ತೆಗೆದುಕೊಂಡಳು.

ಈ ಕಡೆ ಆ ತಮ್ಮಂದಿರು ತಮ್ಮ ಅಣ್ಣ ಭಗವದ್ಭಕ್ತ ಬ್ರಾಹ್ಮಣನನ್ನು ಬೇರೆ ಕಳುಹಿಸಿಬಿಟ್ಟಾಗಿನಿಂದ ಅವರು ಉತ್ತರೋತ್ತರ ತೀರಾ ದರಿದ್ರರೂ ಮತ್ತು ದುಃಖಿಗಳೂ ಆಗುತ್ತಾ ಬಂದರು. ಅವರು ಎಷ್ಟು ಹೀನ ಸ್ಥಿತಿಗೆ ಬಂದರೆಂದರೆ ಅವರಿಗೆ ಎಲ್ಲಿಯೂ ಒಂದಿಷ್ಟು ಸಾಲವೂ ಸಹ ದೊರೆಯುತ್ತಿರಲಿಲ್ಲ. ನಮ್ಮ ಅಣ್ಣನ ಮನೆಯ ಬಾಗಿಲಲ್ಲಿ ಯಾವಾಗಲೂ ಭಿಕ್ಷುಕರ ಗುಂಪೇ ಇರುತ್ತದೆ, ಅವನು ಅಷ್ಟೊಂದು ಧನಿಕನಾಗಿದ್ದಾನೆ ಎಂಬ ಸುದ್ದಿ ಕೇಳಿದಾಗ ಅವರೂ ಸಹ ತಮ್ಮ ಅಣ್ಣನ ಬಳಿಗೆ ಹೋದರು, ಪರಮ ಭಕ್ತನಾದ ಪಂಡಿತನು ತಮ್ಮಂದಿರು ಬಂದಿರುವುದನ್ನು ಕಂಡು ಅವರನ್ನು ಎದೆಗೆ ಅಪ್ಪಿಕೊಂಡನು ಮತ್ತು ಅವರ ಯೋಗಕ್ಷೇಮಾದಿಗಳನ್ನು ಕೇಳಿಕೊಂಡನು. ಅವರು

ಉತ್ತರವಾಗಿ ಹೇಳಿದರು–'ನಿಮ್ಮಂತಹ ಸಜ್ಜನ ಪುರುಷನಿಂದ ಬೇರೆಯಾಗಿ ಹೋದ ನಮಗೆ ಸೌಖ್ಯವೆಲ್ಲಿ? ನಾವು ಮುಖ ತೋರಿಸಲೂ ಯೋಗ್ಯರಲ್ಲ. ಹೀಗಿದ್ದರೂ ನೀವು ನಮ್ಮ ಮೇಲೆ ದಯೆತೋರಿಸಿ ಪ್ರೇಮದಿಂದ ಕಾಣುತ್ತಿರುವಿರಿ, ಇದು ನಿಮ್ಮ ಸೌಹಾರ್ದ.' ಅಣ್ಣನು ಹೇಳಿದನು–'ಸಹೋದರರರೇ! ಹಾಗೆ ಹೇಳಬೇಡಿ. ನಾವು ಮೂವರೂ ಸಹೋದರರು. ನಾವುಗಳು ಎಂದೋ ಸ್ವಲ್ಪವೇ ಬೇರೆಯಾಗಿ ಹೋದುದಾಯಿತು. ಇದು ನಮ್ಮ ಮುಂದಿನ ಒಳ್ಳೆಯ ಲಕ್ಷಣಗಳಿಗಾಗಿ ಆಯಿತು. ನಾವು ಮೊದಲಿನಿಂದ ಹೇಗೆ ಪ್ರೇಮದಿಂದ ಇರುತ್ತಿದ್ದೆವೋ, ಈಗಲೂ ನಾವು ಹಾಗೆಯೇ ಇರಬೇಕು. ಪ್ರಪಂಚದಲ್ಲಿ ಸಹೋದರ ಅಣ್ಣ ತಮ್ಮಂದಿರಿಗೆ ಸಮಾನರಾದ ಹಿತೈಷಿಗಳು ಮತ್ತು ಪ್ರೇಮಿಗಳು ಯಾರಿದ್ದಾರೆ ? ನೀವುಗಳೆಲ್ಲಾ ನಾಚಿಕೆ ಮತ್ತು ಪಶ್ಚಾತ್ತಾಪಪಡದೆ ಮೊದಲಿನಂತೆ ಪ್ರೀತಿಯಿಡಬೇಕು. ನೋಡುತ್ತಿರುವ ಈ ಸ್ವಲ್ಪ ಐಶ್ವರ್ಯದಲ್ಲಿ ಸಹೋದರರರೇ ! ನನ್ನದೇನಿದೆ ? ಇದೆಲ್ಲವೂ ಭಗವಂತನ ವಿಭೂತಿ. ಯಾರೇ ಆದರೂ ಆ ಭಗವಂತನನ್ನು ಅವಲಂಬಿಸಿದರೆ, ಭಗವಂತನು ಎಲ್ಲಾ ರೀತಿಯಿಂದಲೂ ಅವನ ಯೋಗಕ್ಷೇಮದ ಹೊಣೆಯನ್ನು ಹೊರುತ್ತಾನೆ. ಬಾಲಕನು ತಾಯಿ ತಂದೆಯರನ್ನೇ ಅವಲಂಬಿಸಿಕೊಂಡು ನಿಶ್ಚಿಂತನಾಗಿ ನಡೆದುಕೊಳ್ಳುವಂತೇ ಮತ್ತು ತಾಯಿ ತಂದೆಯೇ ಎಲ್ಲಾ ಪ್ರಕಾರದಿಂದಲೂ ಅವನ ಪಾಲನೆ ಪೋಷಣೆ ಮಾಡುವಂತೆಯೇ, ಅಲ್ಲ ಅಲ್ಲ, ಅದಕ್ಕಿಂತಲೂ ಹೆಚ್ಚಾಗಿ ಭಗವಂತನು ತನ್ನ ಆಶ್ರಿತರ ಪಾಲನೆ–ಪೋಷಣೆ ಮತ್ತು ಸಂರಕ್ಷಣೆ ಮಾಡುತ್ತಾನೆ. ಇಷ್ಟೇ ಏನು, ಆತನು ತನ್ನನ್ನೇ ಅವರಿಗೆ ಸಮರ್ಪಿಸಿಕೊಂಡು ಬಿಡುತ್ತಾನೆ. ಆದುದರಿಂದ ನೀವುಗಳೆಲ್ಲಾ

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಈ ಶ್ಲೋಕದಲ್ಲಿ ಹೇಳಲಾಗಿರುವ ಮಾತಿನ ಮೇಲೆ ನಂಬಿಕೆಯಿಟ್ಟು ನಿತ್ಯ ನಿರಂತರ ಭಗವಂತನನ್ನೇ ಚಿಂತಿಸಬೇಕು ಹಾಗೂ ಅರ್ಥ ಮತ್ತು ಭಾವವನ್ನು ತಿಳಿದುಕೊಂಡು ದಿನವೂ ಶ್ರೀಗೀತೆಯ ಅಧ್ಯಯನ ಮತ್ತು ಅಧ್ಯಾಪನ ಮಾಡಬೇಕು.'

ಅನಂತರ ಅವರಿಬ್ಬರು ತಮ್ಮಂದಿರೂ ಅಣ್ಣನೊಡನೆ ಇದ್ದುಕೊಂಡು ಅವನ

ಆಜ್ಞೆಯಂತೆ ನಿತ್ಯ-ನಿರಂತರ ಜಪ, ಧ್ಯಾನ ಹಾಗೂ ಗೀತಾಪಾಠ ಮಾಡಲು ಆರಂಭಿಸಿದರು. ಸ್ವಲ್ಪವೇ ಕಾಲದಲ್ಲಿ ಭಗವಂತನ ಭಕ್ತರಾಗಿ ಭಗವತ್ಕೃಪೆಯಿಂದ ಭಗವಂತನ ಸಾಕ್ಷಾತ್ಕಾರ ಪಡೆದರು.

ಈ ಕಥೆಯು ಎಷ್ಟರಮಟ್ಟಿಗೆ ನಿಜವೆಂಬುದು ಗೊತ್ತಿಲ್ಲ. ಆದರೆ ನಾವು ಇದರಿಂದ ಭಗವಂತನನ್ನೇ ಅವಲಂಬಿಸಿದರೆ ಅವನು ಯೋಗಕ್ಷೇಮದ ಹೊಣೆಯನ್ನು ವಹಿಸಿಕೊಳ್ಳುತ್ತಾನೆ ಎಂಬ ಪಾಠವನ್ನು ಕಲಿಯಬೇಕು. ಆದ್ದರಿಂದ ನಾವೂ ಇದರಲ್ಲಿ ನಂಬಿಕೆಯಿಟ್ಟು ಭಗವಂತನ ಮೇಲೆ ಅವಲಂಬಿತರಾಗಿರೋಣ. ನಿತ್ಯ ನಿರಂತರ ಭಗವಂತನನ್ನು ನಿಷ್ಕಾಮಭಾವದಿಂದ ಸ್ಮರಿಸಬೇಕು ಎಂಬುದು ಸರ್ವೋತ್ತಮವಾದ ಮಾತು. ಯೋಗಕ್ಷೇಮದ ಇಚ್ಛೆಯನ್ನೂ ಮಾಡದೆ ಭಗವಂತನಲ್ಲಿ ಕೇವಲ ಕಾರಣರಹಿತ ವಿಶುದ್ಧ ಪ್ರೇಮವಿರಲಿ, ಇದಕ್ಕಾಗಿ ಪ್ರಯತ್ನಮಾಡಬೇಕು. ಆದರೆ ಯೋಗಕ್ಷೇಮದ ಇಚ್ಛೆಯೇ ಇರುವುದಾದರೆ ನಿಜವಾದ ಪಾರಮಾರ್ಥಿಕ ಯೋಗಕ್ಷೇಮ ಇಚ್ಛೆಯನ್ನು ಮಾಡಬೇಕು. ದುರ್ಲಭವಾದುದರ ಪ್ರಾಪ್ತಿಯ ಹೆಸರೇ 'ಯೋಗ' ಮತ್ತು ಪ್ರಾಪ್ತಿಯಾಗಿರುವುದರ ರಕ್ಷಣೆಯ ಹೆಸರೇ 'ಕ್ಷೇಮ'. ಪಾರಮಾರ್ಥಿಕ ಯೋಗಕ್ಷೇಮದ ಅಭಿಪ್ರಾಯವೇನೆಂದರೆ, ಪರಮಾತ್ಮನ ಸಾಕ್ಷಾತ್ಕಾರ ಪಡೆಯುವ ಮಾರ್ಗದಲ್ಲಿ ನಾವು ಎಷ್ಟು ಮುಂದಕ್ಕೆ ಹೋಗಿದ್ದೇವೆಯೋ, ಅಲ್ಲಿ ಪ್ರಾಪ್ತಿಯಾದ ಸಾಧನ ಸಂಪತ್ತಿಯನ್ನು ಭಗವಂತನು ರಕ್ಷಿಸುತ್ತಾನೆ. ಆತನ ಸಾಕ್ಷಾತ್ಕಾರ ಪಡೆಯಲು ಏನೇನು ಕೊರತೆ ಯುಂಟೋ ಅದನ್ನು ಭಗವಂತನು ಪೂರೈಸಿ ಕೊಡುತ್ತಾನೆ. ಹಾಗೆಂದು ಭಗವಂತನು ಆಶ್ವಾಸನೆ ಕೊಟ್ಟಿರುತ್ತಾನೆ. ಈ ಪ್ರಕಾರ ತಿಳಿದುಕೊಂಡು ಮತ್ತು ಇದರಲ್ಲಿ ನಂಬಿಕೆಯಿಟ್ಟು ಭಗವಂತನನ್ನು ಅವಲಂಬಿಸಿ ಹಾಗೂ ನಿರ್ಭಯದಿಂದ ಇರಬೇಕು, ಭಗವಚ್ಚಿಂತನೆಯ ಹೊರತು ಮತ್ತೆ ಯಾವ ಚಿಂತನೆಯನ್ನು ಕಿಂಚಿತ್ತೂ ಮಾಡಬಾರದು.

ಸಾಂಸಾರಿಕ ಯೋಗಕ್ಷೇಮಕ್ಕಾಗಿ ಭಗವಂತನನ್ನು ಭಜಿಸುವವರೂ ಸಹ ಭಜಿಸದೇ ಇರುವವರಿಗಿಂತ ಉತ್ತಮರೇ, ಏಕೆಂದರೆ ಭಗವಂತನು ಅರ್ಥಾರ್ಥಿ, ಆರ್ತ ಮುಂತಾದ ಭಕ್ತರನ್ನೂ ಉದಾರರು ಶ್ರೇಷ್ಠರು ಎಂದು ತಿಳಿಸಿರುತ್ತಾನೆ- **'ಉದಾರಾಃ ಸರ್ವ ಏವೈತೇ'** (ಗೀತಾ ೭/೧೮)

ನಿಷ್ಕಾಮನಾದ ಜ್ಞಾನೀ ಅನನ್ಯ ಭಕ್ತನನ್ನು ತನ್ನ ಸ್ವರೂಪವೆಂದೇ ತಿಳಿಸಿರುತ್ತಾನೆ. ಏಕೆಂದರೆ ಆ ನಿಷ್ಕಾಮೀ ಜ್ಞಾನಿಗೆ ಪರಮಾತ್ಮನೊಬ್ಬನಲ್ಲದೇ ಬೇರೆ ಯಾರೂ ಗತಿಯೇ ಇಲ್ಲ.

ಆದುದರಿಂದ ನಾವು ಭಗವಂತನ ನಿಷ್ಕಾಮ ಜ್ಞಾನೀ ಅನನ್ಯ ಭಕ್ತರಾಗೋಣ, ಏಕೆಂದರೆ ಅಂತಹ ಭಕ್ತನು ಭಗವಂತನಿಗೆ ಅತ್ಯಂತ ಪ್ರಿಯನು. ಭಗವಂತನು ಹೇಳಿದ್ದಾನೆ.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥**

(ಗೀತಾ ೭/೧೭)

ಭಕ್ತರುಗಳಲ್ಲಿ ಸದಾ ನನ್ನಲ್ಲಿಯೇ ಏಕೀಭಾವದಿಂದ ಸ್ಥಿರವಾಗಿರುವ ಅನನ್ಯಪ್ರೇಮ–ಭಕ್ತಿಯುಳ್ಳ ಜ್ಞಾನೀ ಭಕ್ತನು ಅತಿ ಉತ್ತಮನು,ಏಕೆಂದರೆ ನನ್ನನ್ನು ಯಥಾರ್ಥವಾಗಿ ತತ್ವಶಃ ತಿಳಿದುಕೊಂಡಿರುವ ಜ್ಞಾನಿಗೆ ನಾನು ಅತ್ಯಂತ ಪ್ರಿಯನಾಗಿದ್ದೇನೆ ಮತ್ತು ಆ ಜ್ಞಾನಿ ನನಗೂ ಅತ್ಯಂತ ಪ್ರಿಯನಾಗಿರುವನು.

❑❑❑

# ೨. ನಿಷ್ಕಾಮತೆ

ರಾಮು ಮತ್ತು ಗೋಪಾಲ ಇಬ್ಬರೂ ರಾಮಪುರ ಎಂಬ ಒಂದೇ ಊರಿನಲ್ಲಿ ವಾಸಿಸುತ್ತಿದ್ದರು. ಇಬ್ಬರೂ ಬೋಯಿ ಜನಾಂಗದವರಾಗಿದ್ದರು. ಗೋಪಾಲನು ಇಚ್ಛಾನಗರೀ ನರೇಶನ ಪ್ರಧಾನಮಂತ್ರಿಯ ಶಿರಸ್ತೇದಾರನ ಮನೆಯಲ್ಲಿ ಪಾತ್ರೆ ಉಜ್ಜುವುದು, ಕಸ ಗುಡಿಸುವುದು ಇತ್ಯಾದಿ ಕೆಲಸ ಮಾಡುತ್ತಿದ್ದನು. ರಾಮುವಿಗಿಂತ ವಯಸ್ಸಿನಲ್ಲಿ ದೊಡ್ಡವನಾಗಿದ್ದನು, ಆದರೆ ಸಂಬಂಧದಲ್ಲಿ ಸಹೋದರನಾಗಿದ್ದನು. ರಾಮುವಿನ ತಂದೆ ಊರಿನಲ್ಲಿ ಗಣ್ಯವಕ್ತಿಯಾಗಿದ್ದನು. ರಾಮು ಬೋಯಿ ಮನೆಯಲ್ಲಿ ಹುಟ್ಟಿದ್ದನು, ಆದರೆ ಅವನು ಬಹಳ ಬುದ್ಧಿವಂತನಾಗಿದ್ದನು ಮತ್ತು ಅವನಲ್ಲಿ ಸ್ವಾಭಾವಿಕವಾಗಿಯೇ ಸಾತ್ವಿಕ ಗುಣಗಳು ಅಧಿಕವಾಗಿ ಕಂಡುಬರುತ್ತಿದ್ದವು. ರಾಮುವಿನ

ಹೃದಯದಲ್ಲಿ ಭಗವದ್ಭಕ್ತಿ, ವಿನಯ, ಸಂತೋಷ ಮತ್ತು ನಿಷ್ಕಾಮಭಾವ ಮುಂತಾದ ಗುಣಗಳೂ ವಿಕಾಸಗೊಂಡಿದ್ದವು. ಅವನ ಮುಖ ಮುದ್ರೆಯೂ ರಾಜಕುಮಾರನಂತೆ ಸುಂದರವಾಗಿತ್ತು. ಊರಿನ ಜನರೆಲ್ಲರೂ ಅವನನ್ನು ಪ್ರೀತಿಸುತ್ತಿದ್ದರು. ಅವನು ಹದಿನೈದನೇ ವಯಸ್ಸಿನಲ್ಲಿಯೇ ಊರಿನ ವಯೋವೃದ್ಧ ಪಂಡಿತ ರಮಾಕಾಂತರಿಂದ ವಿದ್ಯೆ ಕಲಿತನು. ಅವರು ಬಹು ಸಂಯಮಿ, ಸದಾಚಾರಿ ಹಾಗೂ ಭಗವದ್ಭಕ್ತ ವಿದ್ವಾಂಸರಾಗಿದ್ದರು. ಅವರು ನಗರದ ಶ್ರೇಷ್ಠ ಅಧ್ಯಾಪಕ ವೃತ್ತಿಯನ್ನು ಬಿಟ್ಟು ನಿಃಸ್ವಾರ್ಥಭಾವದಿಂದ ಊರಿನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ರಾಮು ಅವರಿಂದ ಒಳ್ಳೆಯ ವಿದ್ಯಾಭ್ಯಾಸದ ಜೊತೆಗೆ ಬಹಳ ಸದ್ಗುಣಗಳನ್ನೂ ಸಹ ಪಡೆದುಕೊಂಡಿದ್ದನು.

ರಾಮುವಿನ ಊರಾದ ರಾಮಪುರವು ರಾಜಧಾನಿ ಇಚ್ಛಾನಗರಿಯಿಂದ ಸ್ವಲ್ಪವೇ ದೂರದಲ್ಲಿತ್ತು. ಒಂದು ದಿವಸ ರಾಮು ಬೆಳಗಿನ ಜಾವದಲ್ಲಿಯೇ ಸ್ನಾನ ಮಾಡಿ ಮನೆಯಿಂದ ಹೊರಟನು ಮತ್ತು ಬೆಳಕಾಗುತ್ತಿದ್ದಂತೆಯೇ ಇಚ್ಛಾನಗರಿಯನ್ನು ಸೇರಿದನು. ಅವನು ಹುಡುಕುತ್ತಾ ಹುಡುಕುತ್ತಾ ಹೋಗಿ ಗೋಪಾಲನ ಮನೆಗೆ ತಲುಪಿದನು, ಕೂಡಲೇ ಗೋಪಾಲನ ಕಾಲುಗಳನ್ನು ಹಿಡಿದುಕೊಂಡನು. ಗೋಪಾಲನು ಆಗತಾನೇ ಹಾಸಿಗೆಯಿಂದ ಎದ್ದಿದ್ದನು. ರಾಮುವನ್ನು ಈ ರೀತಿ ನೋಡಿ ಅವನು ಬೆಚ್ಚಿದನು ಮತ್ತು ಉತ್ಸಾಹ ಹಾಗೂ ಆಶ್ಚರ್ಯಗಳಿಂದ ಅವನ ಮುಖದ ಕಡೆಗೇ ನೋಡಿದನು.

'ಅಣ್ಣಾ! ನೀನೇ ಧನ್ಯ' ಎಂದು ರಾಮು ಕಾಲುಗಳನ್ನು ಹಿಡಿದುಕೊಂಡೇ ಹೇಳಿದನು. 'ತಮ್ಮಾ! ನೀನು ಬಂದುದು ಬಹಳ ಒಳ್ಳೆಯದಾಯಿತು. ಊರಿನಲ್ಲಿ ಎಲ್ಲರೂ ಕ್ಷೇಮ ತಾನೆ? ಆದರೆ ನೀನು ನನ್ನ ಕಾಲನ್ನು ಏಕೆ ಹಿಡಿದುಕೊಂಡೆ? ನೀನು ನನ್ನ ಸಹೋದರನ ಹಾಗೆ ಅಲ್ಲವೇ? ಎಂದು ಗೋಪಾಲನು ಒಂದೇ ಉಸಿರಿನಲ್ಲಿ ಹೇಳುತ್ತಾ ಹಿಂದಕ್ಕೆ ಸರಿದನು.

'ಅಣ್ಣಾ! ನಿನ್ನ ಮಹಿಮೆಯನ್ನು ನಾನು ಏನೆಂದು ಹೇಳಲಿ! ನೀನೇ ಧನ್ಯ' ಎಂದು ರಾಮು ಗದ್ಗದ ವಾಣಿಯಿಂದ ಪುನಃ ಹೇಳಿದನು.

‘ತಮ್ಮಾ ! ನಾನು ನಿಮ್ಮ ಮನೆಯವನೇ ಅಲ್ಲವೇ! ನನ್ನ ಕೆಲಸವನ್ನು ನೋಡಿದರೆ ನಾನು ಮಹಾರಾಜರ ದಿವಾನರ ಶಿರಸ್ತೇದಾರರ ಮನೆಯಲ್ಲಿ ಪಾತ್ರೆ ಉಜ್ಜುವ ಕೆಳದರ್ಜೆಯ ನೌಕರನಾಗಿದ್ದೇನೆ, ನಾನು ಧನ್ಯನೆಂತಾದೆ?’ ಗೋಪಾಲನು ತಿಳಿದುಕೊಳ್ಳುವ ಇಚ್ಛೆಯಿಂದ ಹೇಳಿದನು.

‘ಅಣ್ಣಾ! ಆದುದರಿಂದಲೇ ನೀನು ಧನ್ಯನಾದೆ. ನಿನಗೂ ಗೊತ್ತು, ನಮ್ಮ ಮಹಾರಾಜನು ಉಚ್ಚಮಟ್ಟದ ಮಹಾಪುರುಷರು, ಅವರು ಅನನ್ಯ ಭಕ್ತ, ಜ್ಞಾನೀ ಮತ್ತು ಯೋಗೀ ಮಹಾತ್ಮಾರು’ ಎಂದು ರಾಮು ಗೋಪಾಲನ ಕಾಲುಗಳನ್ನು ತಬ್ಬಿಕೊಳ್ಳುತ್ತಾ ಹೇಳಿದನು.

‘ಆದರೆ ಇದರಿಂದ ಏನಾಯಿತು? ಈ ಸದ್ಗುಣಗಳಿಂದ ಸಂಪನ್ನನಾಗಿರುವವನು ಮಹಾರಾಜನಲ್ಲವೆ?’ ಕಾಲನ್ನು ಬಿಡಿಸಿಕೊಳ್ಳುತ್ತಾ ಗೋಪಾಲನು ಹೇಳಿದನು– ‘ನನ್ನಲ್ಲಿಯಾದರೋ ಯಾವ ಗುಣವೂ ಇಲ್ಲ.’

ರಾಮು ಆದರ ಮತ್ತು ಪ್ರೇಮ ಪೂರಿತ ಶಬ್ದಗಳಲ್ಲಿ ಹೇಳಿದನು–‘ಅಣ್ಣಾ! ಅಂತಹ ಮಹಾಪುರುಷನಾದ ಮಹಾರಾಜನ ದಿವಾನನ ಶಿರಸ್ತೇದಾರನಲ್ಲಿ ನಿನಗೆ ನೌಕರಿ ಸಿಕ್ಕುವುದು ಸಾಧಾರಣವಾದ ಮಾತೇನು? ನನಗಾದರೋ ಅಂತಹ ನೌಕರಿ ಸಿಕ್ಕಿದರೆ ನಾನು ನನ್ನ ಜೀವನವನ್ನು ಸಫಲವೆಂದು ತಿಳಿಯುವೆನು, ಇಷ್ಟಲ್ಲದೆ ನಿನ್ನ ಸೇವೆಯ ಅವಕಾಶ ಸಿಕ್ಕಿದರೂ ನನ್ನ ಜೀವನ ಧನ್ಯವಾಗಬಲ್ಲದು’ ಎಂದು ಹೇಳಿ ಅವನು ಗೋಪಾಲನ ಮುಖವನ್ನೇ ನೋಡುತ್ತಿದ್ದನು.

ಗೋಪಾಲನ ಮೇಲೆ ರಾಮುವಿನ ಶಬ್ದಗಳ ಪ್ರಭಾವ ಬಹಳವಾಗಿ ಬಿತ್ತು. ಗೋಪಾಲನು ಹೇಳಿದನು–‘ತಮ್ಮಾ! ಶಿರಸ್ತೇದಾರರಿಗೆ ಒಬ್ಬ ಆಳಿನ ಅಗತ್ಯವಿತ್ತು. ಅವರು ನನಗೆ ಹೇಳುತ್ತಿದ್ದರು. ನೀನು ಬಂದಿರುವೆ ಮತ್ತು ನೀನೂ ಬಯಸುತ್ತಿರುವೆ. ಆದುದರಿಂದ ಈ ದಿನವೇ ನಾನು ನಿನಗೆ ಕೆಲಸ ಕೊಡಿಸುವೆನು’

ರಾಮು ಶಿಸ್ತೇದಾರನ ಮನೆಯಲ್ಲಿ ಬಹಳ ಪ್ರೀತಿಯಿಂದ ಕೆಲಸ ಮಾಡಲು ಪ್ರಾರಂಭಿಸಿದನು. ತಿಂಗಳು ಪೂರ್ತಿಯಾದ ಮೇಲೆ ಗೋಪಾಲನ ಮೂಲಕ ಕಳುಹಿಸಲ್ಪಟ್ಟ

ವೇತನವನ್ನು ಅವನು ತೆಗೆದುಕೊಳ್ಳದಿದ್ದಾಗ ಶಿರಸ್ತೇದಾರನು ಅವನನ್ನು ಕರೆಯಿಸಿ ಹೇಳಿದನು–

'ನೀನು ಅತ್ಯಂತ ಉತ್ಸಾಹ, ಶ್ರದ್ಧೆ, ಪ್ರೇಮ ಹಾಗೂ ತತ್ಪರತೆಯಿಂದ ಹಗಲು ರಾತ್ರಿ ಕೆಲಸ ಮಾಡುವೆ. ಕೆಲಸವನ್ನೂ ಮೊದಲನೇ ನೌಕರನಿಗಿಂತ ಎರಡರಷ್ಟು ಮಾಡುವೆ. ಇಷ್ಟು ಕೆಲಸವನ್ನು ಯಾವ ನೌಕರನೂ ಮಾಡುವುದಿಲ್ಲ. ಆದಾಗ್ಯೂ ಹಿಂದಿನ ತಿಂಗಳು ನೀನು ವೇತನವನ್ನು ತೆಗೆದುಕೊಳ್ಳಲಿಲ್ಲ. ಆದುದರಿಂದ ನನಗೆ ಬಹಳ ಬೇಸರವಾಗುತ್ತಿದೆ. ನಿನಗೆ ಹತ್ತು ರೂಪಾಯಿ ತಿಂಗಳಿಗೆ ಬಹಳ ಕಡಿಮೆ ಎಂದು ನನಗೆ ತಿಳಿಯುತ್ತದೆ. ಈಗ ನೀನು ಎಷ್ಟು ಹೇಳುವಿಯೋ ಅಷ್ಟು ರೂಪಾಯಿಗಳನ್ನು ಪ್ರತಿ ತಿಂಗಳಿಗೂ ನಿರ್ಧಾರಮಾಡಿಬಿಡುವೆನು.'

ರಾಮುವಿನ ಸಂತೋಷಕ್ಕೆ ಮಿತಿಯಿಲ್ಲವಾಯಿತು. ಶುದ್ಧ, ಸಾತ್ವಿಕ ದಿವ್ಯಗುಣ ಸಂಪನ್ನನಾದ ರಾಜನ ಮಂತ್ರಿಯ ಶಿರಸ್ತೇದಾರನ ಹತ್ತಿರ ಇರುವುದಕ್ಕೆ ಅವನಿಗೆ ಸ್ಥಾನ ದೊರಕಿತ್ತು. ಆ ಕಾರಣ ಅವನು ಅಹಂಕಾರ, ಮಮಕಾರ ಹಾಗೂ ಆಸಕ್ತಿ ಮತ್ತು ಸ್ವಾರ್ಥವನ್ನು ತ್ಯಾಗ ಮಾಡಿ ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಕೂಡಿದ ಹೃದಯ ಸಹಿತ ನಿಷ್ಕಾಮಭಾವದಿಂದ ಸೇವೆಮಾಡುತ್ತಾ ಇದ್ದನು. ಶಿರಸ್ತೇದಾರನು ಅದರಿಂದ ಅತ್ಯಂತ ಸಂತುಷ್ಟನಾದನು. ರಾಮು ಶಿರಸ್ತೇದಾರನ ಮಾತನ್ನು ಕೇಳಿ ಅತಿವಿನಯದಿಂದ ಉತ್ತರಕೊಟ್ಟನು–'ನಾನು ರೂಪಾಯಿಗಳನ್ನು ತೆಗೆದುಕೊಳ್ಳದೆ ಇರುವುದಕ್ಕೆ ವೇತನ ಕಡಿಮೆಯೆಂಬುದು ಕಾರಣವಲ್ಲ.'

ಶಿರಸ್ತೇದಾರನು ಚಕಿತನಾಗಿಹೋದನು. ಅವನಿಗೆ ರಾಮುವಿನ ಮಾತಿನ ಮೇಲೆ ತಕ್ಷಣ ನಂಬಿಕೆಯಾಗಲಿಲ್ಲ. ಅವನು ಕೇಳಿದನು–'ಹಾಗಾದರೆ ನೀನು ಇಷ್ಟೊಂದು ಹೆಚ್ಚು ಶ್ರಮಪಡುವುದೇಕೆ?'

'ನಮ್ಮ ಮಹಾರಾಜರು ಶ್ರೇಷ್ಠದರ್ಜೆಯ ಮಹಾಪುರುಷರಾಗಿದ್ದಾರೆ, ಇದು ನಿಮಗೂ ಗೊತ್ತು. ಅವರು ಯೋಗಿ, ಜ್ಞಾನಿ, ಈಶ್ವರಭಕ್ತ ಮತ್ತು ಸಾಕ್ಷಾತ್ ಮಹಾತ್ಮರು. ನೀವು ಅವರ ಮಂತ್ರಿಯ ಶಿರಸ್ತೇದಾರರು. ನನಗೆ ನಿಮ್ಮಲ್ಲಿ ನೌಕರಿಯ

ಅವಕಾಶ ಸಿಕ್ಕಿರುವುದು ನನ್ನ ಸೌಭಾಗ್ಯ. ಸಂಬಳ ಇದಕ್ಕಿಂತ ಹೆಚ್ಚಿನದು ಯಾವುದು?' ರಾಮು ತಲೆತಗ್ಗಿಸಿಕೊಂಡು ಉತ್ತರ ಕೊಟ್ಟನು.

'ಮಹಾರಾಜರಾದರೋ ನೀನು ಹೇಳಿದ ಹಾಗೆಯೇ ಇದ್ದಾರೆ, ಆದರೆ ನಾನು ಒಬ್ಬ ಸಾಧಾರಣ ಮನುಷ್ಯ. ನನ್ನಲ್ಲಿ ಅವರ ಆ ಯಾವ ಗುಣಗಳೂ ಇಲ್ಲ. ನನ್ನ ಚಾಕರಿಯಿಂದ ನಿನಗೇನು ಲಾಭ?' ಶಿರಸ್ತೇದಾರನು ಉತ್ಸಾಹದಿಂದ ಪ್ರಶ್ನಿಸಿದನು.

'ನೀವು ಅವರ ಮಂತ್ರಿಯ ಶಿರಸ್ತೇದಾರರು. ನಿಮ್ಮಂತಹ ಮಹಾಪುರುಷರ ಸೇವೆ ಮಾಡುವ ಭಾಗ್ಯ ನನಗೆಲ್ಲಿ. ಇನ್ನು ಭಗವಂತನ ಮಾತು ದೂರವೇ ಸರಿ, ಆತನ ಆಶ್ರಿತರಾದ ಭಕ್ತರ ದಾಸಾನುದಾಸರಾದವರ ದಾಸಾನುದಾಸರ ಸೇವೆಯನ್ನು ದೊರಕಿಸಿಕೊಳ್ಳುವುದೂ ಬಹು ಹೆಚ್ಚಿನ ಸೌಭಾಗ್ಯ, ಏಕೆಂದರೆ ಅವರ ಸಂಪರ್ಕದಿಂದ ಯಾವಾಗಲಾದರೂ ಭಗವದನುರಾಗೀ ಮಹಾಪುರುಷರ ದರ್ಶನಲಾಭ ಉಂಟಾಗಬಹುದು. ಇದೇ ರೀತಿ ನಿಮ್ಮ ಸೇವೆ ಮಾಡುತ್ತಾ ನನಗೆ ಯಾವಾಗಲಾದರೂ ಮಂತ್ರಿಯವರ ದರ್ಶನವಾಗಬಹುದು, ಅವರೂ ಆ ಭಗವದ್ಭಕ್ತ ರಾಜರ ನಿಕಟತಮ ಸಂಪರ್ಕದಲ್ಲಿಯೇ ಇರುತ್ತಾರೆ' ರಾಮು ಸರಳತೆಯಿಂದ ಮನಸ್ಸಿನ ನಿಜವಾದ ಮಾತನ್ನು ಹೇಳಿಬಿಟ್ಟನು.

'ಮಂತ್ರಿಯ ದರ್ಶನ ಮಾಡಬೇಕೆ, ಅವರ ದರ್ಶನವನ್ನು ನಾನು ನಿನಗೆ ನಾಳೆಯೇ ಮಾಡಿಸಬಲ್ಲೆನು.' ಶಿರಸ್ತೇದಾರನು ರಾಮುವಿನ ಪವಿತ್ರ ಭಾವನೆಗೆ ಮುಗ್ಧನಾಗಿ ಹೋದನು. ಅವನು ಹೇಳಿದನು–'ಮಂತ್ರಿಯವರು ಬೆಳಿಗ್ಗೆ ಎಂಟೂವರೆ ಗಂಟೆಗೆ ನ್ಯಾಯಾಲಯಕ್ಕೆ ಬರುತ್ತಾರೆ ಮತ್ತು ನಾನು ಅಲ್ಲಿಗೆ ಎಂಟು ಗಂಟೆಗೆ ಹೊರಟುಹೋಗುತ್ತೇನೆ, ನೀನು ಒಂಭತ್ತು ಗಂಟೆ ಹೊತ್ತಿಗೆ ಒಂದು ಲೋಟ ಟೀ ಮತ್ತು ನೀರನ್ನು ತೆಗೆದುಕೊಂಡು ಅಲ್ಲಿಗೆ ಬರುವುದು. ಸಂಬಳಕ್ಕಾಗಿ ಎಷ್ಟು ರೂಪಾಯಿಬೇಕು ಹೇಳು, ನಿನ್ನ ಮನೆಗೆ ಕಳುಹಿಸಿಕೊಡುವೆನು.'

'ನನಗೆ ರೂಪಾಯಿಗಳ ಅವಶ್ಯಕತೆಯಿಲ್ಲ, ಮನೆಯ ಕೆಲಸ ನಡೆದು ಹೋಗುತ್ತಿದೆ. ನನಗಾದರೋ ಮಂತ್ರಿಯವರ ದರ್ಶನದಿಂದಲೇ ಎಲ್ಲವೂ ದೊರಕುವುದು' ರಾಮು ಅನುನಯ ವಿನಯದಿಂದ ಹಣ ತೆಗೆದುಕೊಳ್ಳಲು ಒಪ್ಪಲಿಲ್ಲ.

ಶಿರಸ್ತೇದಾರನು ರಾಮುವಿನ ಕಡೆಗೆ ನೋಡುತ್ತಾ ಇದ್ದನು. ಅವನು ಹುಡುಗನ ಸ್ವಭಾವವನ್ನು ಮನಸ್ಸಿನಲ್ಲಿಯೇ ಪ್ರಶಂಸಿಸುತ್ತಿದ್ದನು.

ದಿಂಬುಗಳ ಸಹಾಯದಿಂದ ಆಸನದ ಮೇಲೆ ಕುಳಿತಿರುವ ಮಂತ್ರಿಯು ಬಾಗಿಲ ಕಡೆ ನೋಡಿದನು. ಒಬ್ಬ ಸುಂದರ ಅಪರಿಚಿತ ಯುವಕನು ಕೈಯಲ್ಲಿ ಲೋಟ ಹಿಡಿದು ಬಹು ಮುಗ್ಧದೃಷ್ಟಿಯಿಂದ ರೆಪ್ಪೆಯಾಡಿಸದಂತೆ ಅವನ ಕಡೆಗೆ ನೋಡುತ್ತಿದ್ದನು, ಅದು ಭಗವಂತನ ದರ್ಶನಮಾಡುತ್ತಿರುವಂತಿತ್ತು. ಮಂತ್ರಿಯು ಅನೇಕ ಸಾರಿ ನೋಡಿದನು, ಅವನ ರೆಪ್ಪೆಗಳು ಮುಚ್ಚುತ್ತಲೇ ಇರಲಿಲ್ಲ. ಅವನು ಅತೃಪ್ತ ಕಣ್ಣುಗಳಿಂದ ಮಂತ್ರಿಯ ಕಡೆಗೇ ನೋಡುತ್ತಿದ್ದನು.

'ಇವನು ಯಾರು ಮತ್ತು ಇಲ್ಲೇಕೆ ನಿಂತಿದ್ದಾನೆ?' ಮಂತ್ರಿಯು ಶಿರಸ್ತೇದಾರ ನನ್ನು ಕೇಳಿದರು.

'ಶ್ರೀಮಾನ್! ಇವನು ನಿಮ್ಮ ನೌಕರ. ಇಂದು ನಾನು ಟೀ ಕುಡಿದು ಬರಲಿಲ್ಲ. ಆದ್ದರಿಂದ ಇವನು ಇಲ್ಲಿಗೆ ತಂದಿದ್ದಾನೆ' ಶಿರಸ್ತೇದಾರನು ಹೇಳಿದನು.

'ಒಳ್ಳೆಯದು, ಮೊದಲು ಟೀ ಕುಡಿಯಿರಿ' ಮಂತ್ರಿ ಹೇಳಿದನು.

ಶಿರಸ್ತೇದಾರನು ಟೀ ಕುಡಿದು ಮತ್ತೆ ಕೆಲಸದಲ್ಲಿ ತೊಡಗಿದನು. ಆದರೆ ರಾಮುವಿನ ಪರಮ ಮುಗ್ಧ ಮತ್ತು ಆಕರ್ಷಕ ಪ್ರೇಮ ಪೂರ್ಣದೃಷ್ಟಿಯ ಪ್ರಭಾವ ಮಂತ್ರಿಯ ಮೇಲೆ ಬಿದ್ದುಬಿಟ್ಟಿತ್ತು. ಅವನು ಬಲಪೂರ್ವಕವಾಗಿ ರಾಮುವಿನ ಕಡೆ ನೋಡುತ್ತಿದ್ದನು. ರಾಮು ಟೀ ಪಾತ್ರೆಯನ್ನು ತೊಳೆದು ಅಲ್ಲಿ ಕಸ ಗುಡಿಸಿದನು. ನಂತರ ಮಂತ್ರಿಯ ಪಾದರಕ್ಷೆಗಳನ್ನು ಸ್ವಚ್ಛಮಾಡುವುದರಲ್ಲಿ ನಿರತನಾದನು. ಜೊತೆಗೆ ಅವನು ಪದೇ ಪದೇ ಮಂತ್ರಿಯತ್ತ ಶ್ರದ್ಧೆ ಮತ್ತು ಪ್ರೇಮಪೂರ್ಣ ದೃಷ್ಟಿಯಿಂದ ನೋಡುತ್ತಲೂ ಇದ್ದನು.

'ಈ ಹುಡುಗ ಬಹಳ ಪ್ರೇಮ ಮತ್ತು ಉತ್ಸಾಹದಿಂದ ಹೇಳದಿದ್ದರೂ ಕೆಲಸ ಮಾಡುತ್ತಾನೆ ಮತ್ತು ಅದರಲ್ಲಿಯೂ ಎಷ್ಟು ಬೇಗ ಬೇಗ ಮತ್ತು ಸ್ವಚ್ಛತೆಯಿಂದ

ಮಾಡುತ್ತಾನೆ. ಇವನಿಗೆ ಎಷ್ಟು ಸಂಬಳ ಕೊಡುತ್ತೀರಿ?' ಮಂತ್ರಿಯು ಶಿರಸ್ತೇದಾರನನ್ನು ಕೇಳಿದನು.

'ಶ್ರೀಮಾನ್! ಇವನೇನೋ ಕೆಲಸವನ್ನು ಚೆನ್ನಾಗಿ ಮತ್ತು ಬಹಳ ಸುಂದರವಾಗಿ ಮಾಡುತ್ತಾನೆ, ಆದರೆ ಏನನ್ನೂ ತೆಗೆದುಕೊಳ್ಳುವುದಿಲ್ಲ.'

ಆಶ್ಚರ್ಯಚಕಿತನಾದ ಮಂತ್ರಿಯು ರಾಮುವನ್ನು ತಕ್ಷಣ ತನ್ನ ಬಳಿಗೆ ಕರೆದು ಕೇಳಿದನು–'ನೀನು ಏನನ್ನೂ ತೆಗೆದುಕೊಳ್ಳದೆ ಬಹು ಪ್ರೀತಿಯಿಂದ ಕೆಲಸ ಮಾಡುವೆ, ಇದಕ್ಕೆ ಕಾರಣವನ್ನು ತಿಳಿಸಬಲ್ಲೆಯಾ?'

'ಪ್ರಭು! ಕೇವಲ ನಿಮ್ಮ ದರ್ಶನಕ್ಕಾಗಿ. ಇಂದು ನಾನು ಧನ್ಯನಾದೆ' ರಾಮು ಅಂಜುತ್ತಾ ಮೆಲ್ಲಗೆ ಹೇಳಿದನು.

'ನನ್ನಲ್ಲಿ ಅಂತಹ ಯಾವ ವಿಚಾರವಿದೆಯಪ್ಪಾ?' ಮಂತ್ರಿಯು ಆಕರ್ಷಿತನಾಗಿ ರಾಮುವನ್ನು ಕೇಳಿದನು.

'ಮಂತ್ರಿವರ್ಯರೇ! ನಮ್ಮ ಮಹಾರಾಜರು ಬಹಳ ಶ್ರೇಷ್ಠದರ್ಜೆಯ ಮಹಾಪುರುಷರೆಂಬುದು ನಿಮಗೆ ಗೊತ್ತೇ ಇದೆ. ಅವರು ಯೋಗಿ, ಜ್ಞಾನಿ, ಭಕ್ತರು ಮತ್ತು ಮಹಾತ್ಮರಾಗಿದ್ದಾರೆ. ನೀವು ಅಂತಹ ಪವಿತ್ರಾತ್ಮರಾದ ರಾಜರ ಮಂತ್ರಿಗಳಾಗಿರುವಿರಿ. ನಿಮ್ಮಂತಹ ಪುರುಷರ ದರ್ಶನವಾಗುವುದು ಸಾಧಾರಣವಾದ ಮಾತೇ? ಭಾರಿ ಭಾಗ್ಯವಂತರಾಗಿರುವ ನಿಮ್ಮಂತಹ ಪುರುಷರ ದರ್ಶನ ದೊರೆಯುತ್ತದೆ' ರಾಮು ಬಹು ಪ್ರೀತಿ ವಿನಯಗಳಿಂದ ಹೇಳಿದನು.

'ನಿನಗೆ ಅಂತಹ ಭಾವನೆಯಿರುವುದಾದರೆ, ನೀನು ನಮ್ಮ ಹತ್ತಿರವೇ ಇರಬಹುದು.' ಮಂತ್ರಿಯ ಮೇಲೆ ಪ್ರೇಮವು ಯಕ್ಷಿಣಿಯಂತೆ ಕೆಲಸ ಮಾಡಿತು.

ರಾಮು ಆಶ್ಚರ್ಯಚಕಿತನಾದನು. ಅತ್ಯಂತ ಆನಂದಪಟ್ಟು ಅವನು ಹೇಳಿದನು–'ನಿಮ್ಮ ಚರಣಗಳ ಸಾಮಿಪ್ಯವನ್ನು ಪಡೆದು ನಾನು ನನ್ನನ್ನು ಪರಮ ಸೌಭಾಗ್ಯಶಾಲಿಯೆಂದು ತಿಳಿದುಕೊಳ್ಳುವೆನು.'

'ಇವನನ್ನು ನಾನು ನನ್ನ ಹತ್ತಿರ ಇಟ್ಟುಕೊಳ್ಳಬೇಕೆಂದಿದ್ದೇನೆ'–ಮಂತ್ರಿಯು ಶಿರಸ್ತೇದಾರನ ಕಡೆಗೆ ತಿರುಗಿ ಹೇಳಿದನು.

‘ನೀವು ಸಂತೋಷದಿಂದ ಇಟ್ಟುಕೊಳ್ಳಬಹುದು.’ ಶಿರಸ್ತೇದಾರನು ತನ್ನ ಒಪ್ಪಿಗೆಯನ್ನು ಕೊಟ್ಟುಬಿಟ್ಟನು.

‘ನನ್ನ ಹತ್ತಿರ ನೀನು ಕೆಲಸ ಮಾಡುತ್ತಾ ಬಹಳ ದಿನಗಳೇ ಕಳೆದುಹೋದವು. ಪ್ರೀತಿ ಉತ್ಸಾಹಗಳಿಂದ ನೀನು ಕೆಲಸ ಮಾಡುವ ಹಾಗೆ ಸಾಧಾರಣ ನೌಕರರು ಮಾಡಲಾರರು, ಆದರೆ ಇದುವರೆವಿಗೂ ನೀನು ಏನನ್ನೂ ತೆಗೆದುಕೊಳ್ಳಲಿಲ್ಲ. ಆದ್ದರಿಂದ ನನಗೆ ಸಂಕೋಚವಾಗುತ್ತಿದೆ. ವೇತನ ಬೇಡ, ಆದರೆ ಬಹುಮಾನದ ರೂಪದಲ್ಲಿ ಸ್ವಲ್ಪವನ್ನಾದರೂ ಖಂಡಿತ ತೆಗೆದುಕೋ. ನಾಲ್ಕೈದು ಸಾವಿರ ಎಷ್ಟು ಹೇಳು, ನಾನು ನಿಮ್ಮ ಮನೆಗೆ ಕಳುಹಿಸಿಕೊಡುತ್ತೇನೆ’– ಮಂತ್ರಿಯು ಬಹು ಸ್ನೇಹಭಾವದಿಂದ ಹೇಳಿದನು.

‘ಮನೆಯವರ ಕೆಲಸವೇನೋ ನಡೆದುಹೋಗುತ್ತದೆ, ಮಹಾಪ್ರಭು! ರೂಪಾಯಿಯ ಅಗತ್ಯವಿಲ್ಲ’–ರಾಮು ಶ್ರದ್ಧಾವಂತ ಭಕ್ತನಂತೆ ಉತ್ತರವಿತ್ತನು.

‘ರೂಪಾಯಿ ಬೇಡವಾದರೆ ಮತ್ತೇನಾದರೂ ವಸ್ತುಗಳನ್ನು ಕಳುಹಿಸಿ ಕೊಡುತ್ತೇನೆ. ನಾನು ನಿನ್ನ ಸೇವೆಗೆ ಕೃತಜ್ಞನಾಗಿದ್ದೇನೆ. ನಿನಗೇನಾದರೂ ಪ್ರತ್ಯುಪಕಾರ ಮಾಡಬೇಕೆಂದಿದ್ದೇನೆ’–ಪ್ರಾರ್ಥನಾ ರೂಪವಾಗಿ ಮಂತ್ರಿಯು ಹೇಳಿದನು.

‘ನೀವು ಹಾಗೆ ಹೇಳಿ ನನ್ನನ್ನು ನಾಚಿಸಬೇಡಿರಿ. ನಿಮ್ಮ ಸೇವೆಯೇ ಸರ್ವೋತ್ತಮ ಉಪಹಾರ, ಏಕೆಂದರೆ ನೀವು ಒಬ್ಬ ಮಹಾಪುರುಷರ ಮಂತ್ರಿ ಮತ್ತು ದೇಶದ ಪರಮ ಸೇವಕರು. ನನಗೆ ನಿಮ್ಮ ದರ್ಶನವೂ ದುರ್ಲಭವಾಗಿತ್ತು. ನೀವು ನನಗೆ ಸೇವೆಯ ಸೌಭಾಗ್ಯ ಕರುಣಿಸಿ ಶಾಶ್ವತ ಋಣಿಯನ್ನಾಗಿ ಮಾಡಿದಿರಿ. ನಿಮ್ಮ ಸೇವೆ ಮಾಡುತ್ತಾ ಮಾಡುತ್ತಾ ಯಾವಾಗಲಾದರೂ ನನ್ನ ಪರಮ ಸೌಭಾಗ್ಯದಿಂದ ಮತ್ತು ನಿಮ್ಮ ಕೃಪೆಯಿಂದ ನನಗೆ ಮಹಾರಾಜರ ದರ್ಶನವೂ ಸಹ ಆಗುವುದು’ ರಾಮು ಮನಸ್ಸಿನ ಮಾತನ್ನು ವ್ಯಕ್ತಪಡಿಸಿದನು.

‘ಮಹಾರಾಜರು ಈ ನಗಣ್ಯ ದಾಸನ ಬಗ್ಗೆ ಸಂತುಷ್ಟರಾಗಿರುವಾಗ ನಾನು ಸರ್ವಸ್ವವನ್ನೂ ಪಡೆದುಕೊಂಡಹಾಗೆಯೇ. ನನಗೆ ಹಣದ ಅಗತ್ಯವಿಲ್ಲ.

ಮಹಾರಾಜರ ದರ್ಶನದ ಮಾತೇನು, ಅದನ್ನು ನಾನು ನಿನಗೆ ನಾಳೆಯೆ ಮಾಡಿಸಬಲ್ಲೆ. ನಾನು ರಾಜಸಭೆಗೆ ಹನ್ನೆರಡು ಘಂಟೆಗೆ ಹೋಗುತ್ತೇನೆ ಮತ್ತು ಮಹಾರಾಜರು ಅಲ್ಲಿಗೆ ಒಂದು ಘಂಟೆಗೆ ಬರುತ್ತಾರೆ. ನಾಳೆ ಮಂಗಳವಾರದ ವ್ರತವಿದೆ. ನಾನು ಆ ದಿನ ಏನೂ ತಿನ್ನದೆಯೇ ಹೋಗುತ್ತಿರುತ್ತೇನೆ ಮತ್ತು ನನಗೆ ಫಲಾಹಾರವನ್ನು ಅಲ್ಲಿಗೇ ಕಳುಹಿಸಲಾಗುತ್ತದೆ ಎಂಬುದು ನಿನಗೂ ಗೊತ್ತೇ ಇದೆ. ನೀನು ಎರಡು ಘಂಟೆಗೆ ಫಲಾಹಾರ ತೆಗೆದುಕೊಂಡು ಅಲ್ಲಿಗೆ ಬರುವುದು, ಆದರೆ ಸ್ವಲ್ಪ ಹಣವನ್ನು ಖಂಡಿತ ಮನೆಗೆ ಕಳುಹಿಸಿಕೊಡು. ಎಂದು ಮಂತ್ರಿಯು ಆಗ್ರಹಮಾಡಿದನು.

'ನಾನು ನಿಮಗೆ ಚಿರಋಣಿಯಾಗಿದ್ದೇನೆ, ಪ್ರಭು! ನನಗೆ ಹಣ ಬೇಡ'

ರಾಮುವಿನ ತಲೆ ಶ್ರದ್ಧೆಯಿಂದ ಬಗ್ಗಿಹೋಗಿತ್ತು.

ಮಹಾರಾಜರ ದೃಷ್ಟಿ ಆನಂದಸಾಗರದಲ್ಲಿ ಮುಳುಗಿದ್ದ ರಾಮುವಿನ ಮೇಲೆ ಬಿತ್ತು. ಆತನು ಅವನಲ್ಲಿ ಅದ್ಭುತ ಆನಂದದ ಅನುಭವ ಪಡೆದನು. ಅವನು ನೆಟ್ಟನೋಟದಿಂದ ಮಹಾರಾಜನ ಕಡೆಗೆ ನೋಡುತ್ತಾ ಇದ್ದನು. ಮತ್ತು ಹರ್ಷೋನ್ಮತ್ತನಾಗುತ್ತಿದ್ದಾನೆ. ಇದನ್ನು ಆತನು ಚೆನ್ನಾಗಿ ತಿಳಿದುಕೊಂಡಿದ್ದನು. ಆತನು ಮಂತ್ರಿಯನ್ನು ಕೇಳಿದನು–'ಇವನು ಯಾರು ಮತ್ತು ಇಲ್ಲೇಕೆ ನಿಂತಿದ್ದಾನೆ?'

'ಸ್ವಾಮೀ! ಇವನು ನಿಮ್ಮ ಸೇವಕ. ಇಂದು ಮಂಗಳವಾರ, ಆದ್ದರಿಂದ ಫಲಾಹಾರ ತೆಗೆದುಕೊಂಡು ಬಂದಿದ್ದಾನೆ' ಮಂತ್ರಿ ಹೇಳಿದನು.

'ಒಳ್ಳೆಯದು, ನೀವು ಮೊದಲು ಫಲಾಹಾರ ತೆಗೆದುಕೊಳ್ಳಿ'– ರಾಜನು ಆಜ್ಞೆ ಮಾಡಿದನು.

ಮಂತ್ರಿಯು ಬೇರೆ ಕಡೆ ಹೋಗಿ ಫಲಾಹಾರ ಮಾಡಿದನು ಮತ್ತು ಹಿಂದಿರುಗಿ ಬಂದು ತನ್ನ ಕಾರ್ಯದಲ್ಲಿ ನಿರತನಾದನು. ರಾಮು ಎಂಜಲು ಪಾತ್ರೆಗಳನ್ನು ತೊಳೆದು ಮಂತ್ರಿ ಮತ್ತು ಮಹಾರಾಜರ ಪಾದರಕ್ಷೆಗಳನ್ನು ಒರೆಸಿ ಶುದ್ಧಗೊಳಿಸುತ್ತಿದ್ದನು. ಜೊತೆಗೆ ಅವನು ಮಹಾರಾಜರ ಕಡೆಗೆ ನೋಡಿ ನೋಡಿ ಆನಂದಾತಿರೇಕದಿಂದ

ಪುಳಕಿತ ನಾಗುತ್ತಿದ್ದನು. ಅವನು ಮಂತ್ರಮುಗ್ಧನಂತಾದನು. ಅವನ ಈ ಸ್ಥಿತಿಯ ಅನುಭವ ರಾಜನಿಗೂ ಆಗುತ್ತಿತ್ತು.

'ಈ ಹುಡುಗ ಬಹಳ ಉತ್ಸಾಹಿಯೆಂದು ಕಾಣುತ್ತದೆ. ಇವನಿಗೆ ಎಷ್ಟು ವೇತನ ಕೊಡಲಾಗುತ್ತಿದೆ?' ರಾಜನು ಮಂತ್ರಿಯನ್ನು ಕೇಳಿದನು.

'ಮಹಾಪ್ರಭು! ಕೆಲಸವನ್ನೇನೋ ಇವನು ಬಹು ತತ್ಪರತೆಯಿಂದ ಹಾಗೂ ಪ್ರೇಮೋತ್ಸಾಹಗಳಿಂದ ಮಾಡುತ್ತಾನೆ, ಆದರೆ, ವೇತನವನ್ನು ಬಲವಂತಪಡಿಸಿದರೂ ಸ್ವಲ್ಪವೂ ತೆಗೆದುಕೊಳ್ಳುವುದಿಲ್ಲ'–ಮಂತ್ರಿಯು ಉತ್ತರವಿತ್ತನು.

ಮಹಾರಾಜನಿಗೆ ಬಹಳ ಆಶ್ಚರ್ಯವಾಯಿತು. ಆತನು ರಾಮುವನ್ನು ಕರೆದು ಕೇಳಿದನು–'ನೀನು ಏನನ್ನೂ ತೆಗೆದುಕೊಳ್ಳದೆ ಇಷ್ಟು ಪ್ರೇಮ ಮತ್ತು ಉತ್ಸಾಹದಿಂದ ಕೆಲಸ ಮಾಡುವೆ, ಇದಕ್ಕೆ ಕಾರಣವೇನು?'

'ಮಹಾಪ್ರಭು! ಏನನ್ನೂ ತೆಗೆದುಕೊಳ್ಳದೇ ಹೇಗೆ? ಇವರ ಕೃಪೆಯಿಂದಲೇ ನಾನಿಂದು ಮಹಾಪ್ರಭುಗಳಂತಹ ಅಪ್ರತಿಮ ಮಹಾಪುರುಷರ ದರ್ಶನ ಮಾಡಿ ಕೃತಕೃತ್ಯನಾಗಿ ಹೋದೆನು, ನಾನು ಇಂದು ಮಹಾಪ್ರಭುಗಳ ದರ್ಶನಮಾಡುತ್ತಿದ್ದೇನೆ, ಇದು ನನ್ನ ಅಹೋಭಾಗ್ಯ ಎಂದು ರಾಮು ಗದ್ಗದ ವಾಣಿಯಲ್ಲಿ ಹೇಳಿದನು.

ನೀನು ನಿನ್ನನ್ನು ಕೃತಕೃತ್ಯನೆಂದು ಭಾವಿಸಿಕೊಳ್ಳುವಂತಹ ವಿಚಾರವೇನು?

ಪ್ರಭುಗಳೇ! ಮಹಾಪುರುಷರು, ಪ್ರಭುಗಳಂತಹ ಯೋಗಿ, ಜ್ಞಾನಿ, ಭಕ್ತ ಮತ್ತು ಮಹಾತ್ಮರ ದರ್ಶನ ಬಹಳ ದುರ್ಲಭ. ಅದು ದೊಡ್ಡ ಭಾಗ್ಯದಿಂದ ಉಂಟಾಗುತ್ತದೆ. ಈ ದಿನ ಮಹಾಪ್ರಭುಗಳ ದರ್ಶನಮಾಡಿ ನಾನು ಪರಮ ಧನ್ಯನಾಗಿದ್ದೇನೆ. ನನ್ನ ಜನ್ಮ ಇಂದು ಸಫಲವಾಯಿತು. ಮಹಾಪ್ರಭುಗಳ ಕೃಪೆಯಿಂದ ನಾನು ಇಂದು ನಿಜವಾಗಿಯೂ ಕೃತಾರ್ಥನಾದೆ–ರಾಮು ಮಹಾರಾಜರ ಪಾದಗಳನ್ನು ಹಿಡಿದುಕೊಂಡನು.

'ನೀನು ಇಚ್ಛಿಸುವುದಾದರೆ ನನ್ನ ಜೊತೆ ಯಾವಾಗಲೂ ಇರಬಹುದು'– ರಾಜನು ಪ್ರಭಾವಿತನಾಗಿ ಬಿಟ್ಟನು.

‘ಇದೇನೋ ನನಗೆ ಪರಮ ಸೌಭಾಗ್ಯದ ವಿಷಯ. ಇದಕ್ಕಿಂತಲೂ ಅತ್ಯುತ್ತಮವಾದುದು ಬೇರೇನು ಸಾಧ್ಯ?’ ರಾಮುವಿನ ತಲೆ ರಾಜನ ಪಾದದಲ್ಲಿತ್ತು.

‘ಈ ಹುಡುಗನು ನನ್ನ ಹತ್ತಿರವೇ ಇರಲಿ! ರಾಜನು ಮತ್ರಿಗೆ ಹೇಳಿದನು. ಆತನ ಹೃದಯದಲ್ಲಿ ಸ್ನೇಹ ಉಕ್ಕಿತ್ತು. ಮಂತ್ರಿಯ ತಲೆತಗ್ಗಿಹೋಗಿತ್ತು.

‘ನಾನು ನಿನ್ನ ಸೇವೆಯಿಂದ ಬಹಳ ಸಂತುಷ್ಟನಾಗಿದ್ದೇನೆ. ಆದರೆ ಹಣ ತೆಗೆದುಕೊಳ್ಳುವುದಿಲ್ಲ ಮತ್ತು ಏನನ್ನೂ ಮನೆಗಾದರೂ ಕಳುಹಿಸುವುದಿಲ್ಲ. ನಾನು ನಿನಗೆ ಕೃತಜ್ಞನಾಗಿದ್ದೇನೆ, ನಿನಗೆ ಏನೂ ಇಚ್ಛೆಯಿದೆಯೋ ಅದನ್ನು ಹೇಳು ನಿನ್ನ ಅಭಿಲಾಷೆಯೇನಿದ್ದರೂ ನಾನು ಪೂರ್ಣಗೊಳಿಸಿಕೊಡುತ್ತೇನೆ’-ಎಂದು ರಾಜನು ಹೇಳಿದನು.

‘ಮಹಾರಾಜರು ಈ ನಗಣ್ಯ ದಾಸನ ಬಗ್ಗೆ ಸಂತುಷ್ಟರಾಗಿರುವಾಗ ನಾನು ಸರ್ವಸ್ವವನ್ನೂ ಪಡೆದುಕೊಂಡಹಾಗೆಯೇ. ನನಗೆ ಹಣದ ಅಗತ್ಯವಿಲ್ಲ’ ರಾಮು ಉತ್ತರ ಹೇಳಿದನು.

‘ನಾನು ನಿನಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ನನ್ನ ಸಂತೋಷಕ್ಕಾಗಿ ನೀನು ಅಲ್ಪಸ್ವಲ್ಪ ಏನನ್ನಾದರೂ ತೆಗೆದುಕೊಳ್ಳಲೇಬೇಕಾಗುವುದು. ಅರಸನು ಪುನಃ ಒತ್ತಾಯಪೂರ್ವಕ ಹೇಳಿದನು.

‘ಹೀಗೆಲ್ಲಾ ಹೇಳಿ ನನ್ನನ್ನು ಲಜ್ಜಿತನನ್ನಾಗಿಸಬೇಡಿರಿ. ನನಗಾದರೋ ಮಹಾಪ್ರಭುಗಳ ಸೇವೆಯ ಮುಂದೆ ಭೌತಿಕ ವಸ್ತುಗಳು ಅತ್ಯಂತ ತುಚ್ಛವಾಗಿ ಕಂಡುಬರುತ್ತವೆ. ಇಷ್ಟಲ್ಲದೆ ಮತ್ತೇನೂ ನನಗೆ ಬೇಕಾಗಿಲ್ಲ. ಇಷ್ಟರ ಮೇಲೆಯೂ ನೀವು ಒತ್ತಾಯ ಮಾಡುವುದಾದರೆ, ನಾನು ಏನನ್ನು ಕೇಳಿಕೊಳ್ಳುತ್ತೇನೆಯೋ ಅದನ್ನೇ ನೀವು ಕೊಡಬೇಕಾಗುವುದು ರಾಮು ಮಧುರವಾದ ಮಾತುಗಳಲ್ಲಿ ಹೇಳಿದನು.

‘ನಿಜವಾಗಿಯೂ ನೀನು ಏನನ್ನು ಕೇಳಿಕೊಳ್ಳುವೆಯೋ ಅದನ್ನು ಕೊಟ್ಟುಬಿಡುವೆನು’ ರಾಜನು ನಿಶ್ಚಯಿಸಿಕೊಂಡಿದ್ದನು-ಇವನು ಕೇಳಿಕೊಂಡರೆ ಸಮಸ್ತ ರಾಜ್ಯವನ್ನೂ ಸಹ ಸಂತೋಷವಾಗಿ ಕೊಟ್ಟುಬಿಡುವೆನು.

'ನಾನು ಯಾವಾಗಲೂ ಪ್ರಭುಗಳ ಚರಣಗಳ ಸಂಗಡ ಇರಬಹುದೇ. ಪ್ರಭುಗಳು ಎಂದಿಗೂ ಒಂದು ಕ್ಷಣಕ್ಕಾದರೂ ನನ್ನನ್ನು ತಮ್ಮಿಂದ ಬೇರೆ ಮಾಡಬಾರದು - ಶ್ರದ್ಧಾ ವಿಗಲಿತ ಹೃದಯದಿಂದ ರಾಮು ಮಹಾರಾಜರ ಚರಣಗಳಿಗೆ ಎರಗಿದನು.

ಇದೆಂತಹ ಮಾತು ನೀನು ಹೆಚ್ಚಾಗಿ ನನ್ನೊಡನೆಯೇ ಇರುತ್ತಿರುವೆ. ಮತ್ತೇನನ್ನಾದರೂ ಕೇಳು.

ಅಷ್ಟೇ ನಾನು ಇಚ್ಛಿಸುವುದು.

ನನಗೆ ಯಾವ ತೊಂದರೆಯೂ ಇಲ್ಲ. ನೀನು ಸಂತೋಷದಿಂದ ನನ್ನ ಸಂಗಡ ಇರು.

'ರಾತ್ರಿಯಲ್ಲಿ ಮಲಗುವ ಕೊಠಡಿಯಲ್ಲಿ ನನ್ನ ಹಿಂದೆ ಹೇಗೆ?'

'ಮಹಾಪ್ರಭು! ನಿತ್ಯವೂ ಸಮೀಪದಲ್ಲಿರಲು ಅಪ್ಪಣೆ ದೊರಕಿಬಿಟ್ಟಿದೆ ಕೈಜೋಡಿಸಿಕೊಂಡು ರಾಮು ತಕ್ಷಣ ಉತ್ತರವಿತ್ತನು.

'ಬಾ'-ಮಹಾರಾಜನು ಹೇಳಿದನು.

ರಾಜನು ಮಹಾರಾಣಿಯೊಡನೆ ಹೇಳಿದನು-'ನಿನಗೆ ಯಾರೂ ಪುತ್ರರಿರಲಿಲ್ಲ. ಈಗ ಇವನನ್ನು ನಿನ್ನ ಸೇವೆಗಾಗಿ ಪುತ್ರರೂಪದಿಂದ ಕರೆತಂದಿದ್ದೇನೆ'

ಬಹಳ ಸಂತೋಷ! ರಾಣಿಯು ರಾಮುವಿನ ಕಡೆಗೆ ನೋಡಿದಳು.

ಅವನ ಮನೋಹರ ಮುಖಮಂಡಲವನ್ನು ನೋಡಿ ಆಕೆಯ ಕಣ್ಣುಗಳಿಂದ ಸ್ನೇಹಾಶ್ರುಗಳ ಹನಿಗಳು ತೊಟ್ಟಿಕ್ಕಿದವು. ವಾತ್ಸಲ್ಯ ಉಕ್ಕಿಬಂತು. ರಾಮು ಮಂತ್ರಮುಗ್ಧ ಶಿಶುವಿನಂತೆ ಮಹಾರಾಣಿಯ ಕಡೆ ನೋಡುತ್ತಿದ್ದನು.

ಇದುವರೆಗೂ ಇವನು ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದನು. ಆದರೆ ಇನ್ನು ಕಾಗದ ಪತ್ರಗಳಿಗೆಲ್ಲಾ ಇಂದಿನಿಂದ ಇವನೇ ಸಹಿ ಹಾಕುವನು ಇವನ ಸಹಿಯೇ ನನ್ನ ಸಹಿ ಎಂದು ತಿಳಿಯಲಾಗುವುದು ಎಂದು ರಾಜನು ಮಂತ್ರಿಯೊಡನೆ

ಹೇಳಿದನು. ಆತನು ರಾಮುವಿನ ಸೇವೆಯಿಂದ ಅತ್ಯಂತ ಸಂತುಷ್ಟನಾಗಿದ್ದನು. ರಾಮು ತೀಕ್ಷ್ಣ ಬುದ್ಧಿಯವನಾಗಿದ್ದನು ಮತ್ತು ಮಹಾರಾಜನ ಅನನ್ಯ ಸೇವಕ ಹಾಗೂ ಆತನ ಗುಣಗಳನ್ನು ಸಹಜವಾಗಿಯೇ ತನ್ನಲ್ಲಿ ಅಳವಡಿಸಿಕೊಳ್ಳುತ್ತಿದ್ದನು. ಆದುದರಿಂದ ಕೆಲವೇ ದಿನಗಳಲ್ಲಿ ಅವನು ಬಹುದೊಡ್ಡ ಯೋಗ್ಯತೆಯನ್ನು ಪಡೆದುಕೊಂಡನು. ರಾಮು ವಿದ್ಯಾವಂತನೂ ಆಗಿದ್ದನು.

ಮಂತ್ರಿಯು ಆಜ್ಞೆಯನ್ನು ಶಿರೋಧಾರ್ಯ ಮಾಡಿಕೊಂಡನು. ಕಾಗದಗಳ ಮೇಲೆ ರಾಮುವಿನ ಸಹಿಯಾಗತೊಡಗಿತು.

ಕೆಲವು ದಿನಗಳ ನಂತರ !

ನನಗೆ ಮಕ್ಕಳಿಲ್ಲ, ನಾನು ನಿನಗೆ ಯುವರಾಜ ಪದವಿಯನ್ನು ಕೊಡಲು ಇಚ್ಛಿಸುತ್ತೇನೆ ರಾಜನು ರಾಮುವಿಗೆ ಹೇಳಿದನು. ಆತನು ಅವನನ್ನು ಪುತ್ರನಂತೆ ಪ್ರೀತಿಸುತ್ತಿದ್ದನು.

ಮಹಾಪ್ರಭು! ನನ್ನನ್ನು ನಾಚಿಸಬೇಡಿ. ನಾನು ಪ್ರಭುಗಳ ಚರಣಸೇವೆಯನ್ನು ತ್ಯಜಿಸಲಾರೆ. ಇಷ್ಟೊಂದು ಹೆಚ್ಚಿನ ಲಾಭಕ್ಕೆ ಹೋಲಿಸಿದರೆ ರಾಜ್ಯ ಸುಖ ಕೂಡ ತುಚ್ಛವಾದುದು. ರಾಮು ಸೇವಾಪರಾಯಣ ಪುತ್ರನಂತೆ ಉತ್ತರಕೊಟ್ಟನು.

ರಾಜನು ಅವನ ಮಾತನ್ನು ಒಪ್ಪಿದನು ಮತ್ತು ಆಜ್ಞೆ ಮಾಡಿ ಅವನಿಂದ ರಾಜಕಾರ್ಯ ಮಾಡಿಸಲು ಪ್ರಾರಂಭಿಸಿದನು.

ನಾನಾದರೋ ನಿಮ್ಮ ಸೇವಕ. ಇದೆಲ್ಲವೂ ನಿಮ್ಮ ಕೃಪೆಯಿಂದಲೇ ದೊರಕಿದೆ. ಮಂತ್ರಿಯ ಪಾದಗಳನ್ನು ಹಿಡಿದುಕೊಂಡು ರಾಮು ಹೇಳಿದನು.

ಅಯ್ಯೋ! ನೀವು ಮಹಾರಾಜರ ಪ್ರತಿನಿಧಿ. ನೀವು ಸಿಂಹಾಸನಕ್ಕೆ ಅಧಿಕಾರಿಯಾಗಿರುವಿರಿ. ನನಗೆ ನಾಚಿಕೆಯಾಗುವಂತೆ ಮಾಡಬೇಡಿ. ಗಾಬರಿಗೊಂಡ ಮಂತ್ರಿಯು ಯಾವ ಪ್ರಕಾರದಿಂದಲೋ ರಾಮುವನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವುದರಲ್ಲಿ ಸಫಲನಾದನು.

'ನಾನು ನಿಮ್ಮ ಚರಣಗಳ ನೌಕರ. ಇದೆಲ್ಲವೂ ನಿಮ್ಮ ಕೃಪೆಯಿಂದಲೇ

ನನಗೆ ದೊರಕಿದೆ' ಎಂದು ರಾಮು ಶಿರಸ್ತೇದಾರನ ಕಾಲು ಹಿಡಿದುಕೊಂಡು ಹೇಳಿದ ಮತ್ತು ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲು ಶಿರಸ್ತೇದಾರನು ತನ್ನ ಕಡೆಗೆ ಎಳೆಯ ಲಾರಂಭಿಸಿದನು. ಬಡಪಾಯಿ ಶಿರಸ್ತೇದಾರನು ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಬಂದಿದ್ದನು. ಬಹಳ ಕಷ್ಟದಿಂದ ರಾಮುವನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತನ್ನ ಸ್ಥಳಕ್ಕೆ ಹೋಗಿ ಕುಳಿತನು.

ಅಣ್ಣಾ! ನಿನ್ನ ಕೃಪೆಯಿಂದಲೇ ನನಗೆ ಈ ಸಿಂಹಾಸನ ದೊರಕಿದೆ. ನಡೆ ಸಿಂಹಾಸನದ ಮೇಲೆ ಕುಳಿತುಕೋ-ಸಿಂಹಾಸನದಿಂದ ಇಳಿದು ಓಡುತ್ತಾ ಶಿರಸ್ತೇದಾರನ ಹಳೆಯ ನೌಕರನ ಹತ್ತಿರ ಹೋಗಿ ರಾಮು ವಿನಯದಿಂದ ಹೇಳಿದನು.

ಶಿರಸ್ತೇದಾರರ ಮತ್ತು ಮಂತ್ರಿಗಳ ಎದುರಿಗೆ ನಾನು ಎತ್ತರದ ಆಸನದ ಮೇಲೆ ಎಂದಿಗೂ ಕುಳಿತುಕೊಳ್ಳುವುದಿಲ್ಲ. ನೀವು ನನ್ನನ್ನು ನಾಚಿಸಬೇಡಿ ಎಂದು ಹೇಳಿ ಶಿರಸ್ತೇದಾರನ ನೌಕರ ಅಲ್ಲಿಯೇ ನೆಲದ ಮೇಲೆ ಕುಳಿತಿದ್ದನು. ಅವನು ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಬಂದಿದ್ದನು. ರಾಮುವಿನಲ್ಲಿ ಅಹಂಕಾರವು ಲೇಶಾಂಶವೂ ಸಹ ಇರಲಿಲ್ಲ.

'ನೀನು ವಿನಯದ ಮೂರ್ತಿಮಂತ ಸ್ವರೂಪ, ಅಹಂಭಾವ ಮಮತೆ ಇತ್ಯಾದಿಗಳು ನಿನ್ನನ್ನು ಸ್ಪರ್ಶಿಸಲಾರವು. ಅತ್ಯಂತ ಚಿಕ್ಕ ಕರ್ಮಚಾರಿಯಿಂದ ಮೊದಲ್ಗೊಂಡು ಶ್ರೇಷ್ಠ ಪದಾಧಿಕಾರಿಯವರೆಗೆ ಎಲ್ಲರೂ ನಿನ್ನಿಂದ ಅತ್ಯಂತ ಪ್ರಸನ್ನರಾಗಿದ್ದಾರೆ. ನಿನ್ನಲ್ಲಿ ಆಳ್ವಿಕೆ ನಡೆಸಲು ಅಪೂರ್ವ ಯೋಗ್ಯತೆ ಮತ್ತು ಸಾಮರ್ಥ್ಯ ಸಹ ಕಂಡುಬರುತ್ತಿವೆ. ಆದ್ದರಿಂದ ನೀನು ನನ್ನ ಮಾತನ್ನು ಒಪ್ಪಿಕೊಂಡು ರಾಜಪದವಿಯನ್ನು ಸ್ವೀಕರಿಸು. ಈಗ ನಾನು ಏಕಾಂತವಾಸ ಮಾಡಬೇಕೆಂದಿದ್ದೇನೆ' ರಾಜನು ರಾಮುವಿನ ಮುಂದೆ ಈ ಪ್ರಸ್ತಾಪವೆತ್ತಿದನು.

ಪ್ರಭುಗಳು ಸದಾ ಯಾವಾಗಲೂ ತಮ್ಮ ಚರಣಗಳ ಸಮೀಪದಲ್ಲಿ ಇಟ್ಟುಕೊಳ್ಳುವ ವರವನ್ನು ನನಗೆ ಕೊಟ್ಟುಬಿಟ್ಟಿದ್ದಾರೆ, ಮತ್ತೆ ಒಂದು ಕ್ಷಣವಾದರೂ ನನ್ನನ್ನು ಹೇಗೆ ಬೇರೆ ಮಾಡಬಲ್ಲರು? ನನಗೆ ರಾಜಪದವಿಯ ಇಚ್ಛೆ ಖಂಡಿತ

ಇಲ್ಲ, ಪ್ರಭು ! ಹೀಗೆ ಹೇಳಿ ನನ್ನನ್ನು ನಾಚಿಕೆ ಪಡುವಂತೆ ಮಾಡಬೇಡಿರಿ ಮತ್ತು ನಾನು ಪ್ರಭುಗಳಿಂದ ಒಂದು ಕ್ಷಣವೂ ಸಹ ಬೇರೆಯಿರಲಾರೆನು. ನಾನು ರಾಜಪದವಿಯನ್ನು ಸ್ವೀಕರಿಸಲು ಸರ್ವಥಾ ಅಸಮರ್ಥನು, ಅದಕ್ಕಾಗಿ ಪ್ರೇಮ ಪೂರ್ವ ಕ್ಷಮೆ ಕೇಳುತ್ತೇನೆ. ರಾಮು ವಿನಯ, ಪ್ರೇಮ ಮತ್ತು ದೃಢತೆಯ ಮಾತಿನಿಂದ ತನ್ನ ನಿರ್ಣಯವನ್ನು ಮಹಾರಾಜನಿಗೆ ತಿಳಿಸಿಬಿಟ್ಟನು.

ನನ್ನ ಜೊತೆಯಲ್ಲಿದ್ದು ರಾಜ್ಯದ ಶಾಸನ ಪದವಿಯನ್ನು ತೆಗೆದುಕೋ ಮಹಾರಾಜನು ವಿಧಿಯಿಲ್ಲದೆ ತನ್ನ ಇಚ್ಛೆಯನ್ನು ಬದಲಾಯಿಸಬೇಕಾಯಿತು.

ರಾಮು ಈಗ ರಾಜನ ಜೊತೆಯಲ್ಲಿದ್ದು ರಾಜ್ಯದ ಕೆಲಸ ನಿರ್ವಹಿಸುತ್ತಿದ್ದನು.

ರಾಮು ಬೋಯಿಯ ಈ ಕಲ್ಪಿತ ಕಥೆಯು ದೃಷ್ಟಾಂತ ರೂಪದಿಂದ ಹೇಳಲಾಗಿದೆ. ಇದನ್ನು ಪರಮಾರ್ಥ ವಿಷಯದಲ್ಲಿ ಈ ಪ್ರಕಾರ ಉಪಯೋಗಿಸಿ ಕೊಳ್ಳಬೇಕು. ಪರಮಾತ್ಮನ ಪ್ರಾಪ್ತಿಯ ಮಾರ್ಗದಲ್ಲಿ ನಡೆಯುವ ಸಾಧಕ ಪುರುಷನನ್ನು ಇಲ್ಲಿ ರಾಮು ಬೋಯಿಯೆಂದು ತಿಳಿದುಕೊಳ್ಳಬೇಕು. ಭಗವಂತನ ದಾಸನ ದಾಸಾನುದಾಸನೆಂದು ಶಿರಸ್ತೇದಾರನ ಹತ್ತಿರವಿರುವ ನೌಕರ ಗೋಪಾಲ ನನ್ನು ತಿಳಿದುಕೊಳ್ಳಬೇಕು. ಭಗವಂತನ ದಾಸಾನುದಾಸನೆಂದು ಆ ಶಿರಸ್ತೇದಾರನನ್ನು ತಿಳಿದುಕೊಳ್ಳಬೇಕು ಮತ್ತು ಮಂತ್ರಿಯನ್ನು ಭಗವಂತನ ದಾಸನೆಂದೂ ಹಾಗೂ ಇಚ್ಛಾನಗರಿಯ ಮಹಾರಾಜನನ್ನು ಸಾಕ್ಷಾತ್ ಭಗವಂತ ಎಂದು ತಿಳಿದುಕೊಳ್ಳಬೇಕು. ಮಹಾರಾಜನ ಭಕ್ತಿ, ಜ್ಞಾನ, ಯೋಗ ಮುಂತಾದವನ್ನು ಭಗವಂತನ ಗುಣ ಹಾಗೂ ಪ್ರಭಾವವೆಂದು ತಿಳಿಯಬೇಕು. ರಾಜನ ರಾಣಿಯನ್ನು ಈಶ್ವರನ ಶಕ್ತಿ ಭಗವತೀ ದೇವಿ ಎಂದು ತಿಳಿಯಬೇಕು. ರಾಮು ಬೋಯಿಯು ರಾಜ ಪದವಿವರೆಗೆ ಯಾವ ವೇತನವನ್ನೂ ಸಹ ಸ್ವೀಕರಿಸದೇ ಇರುವುದನ್ನು ನಿಷ್ಕಾಮಭಾವಯುಕ್ತ ಸ್ವಾರ್ಥದ ತ್ಯಾಗ ಹಾಗೂ ಶ್ರದ್ಧಾಪೂರ್ವಕ ಉತ್ಸಾಹದಿಂದ ಕೆಲಸ ಮಾಡುವುದನ್ನು ಅವನ ಸಾಧನೆಯೆಂದೂ ತಿಳಿದುಕೊಳ್ಳಬೇಕು. ಅವನ ಶ್ರದ್ಧೆ, ಭಕ್ತಿ ವಿನಯದಿಂದ ಕೂಡಿದ, ಅಹಂಕಾರ ರಹಿತವಾದ, ನಡವಳಿಕೆಯನ್ನೇ ಆದರ್ಶ ಶಿಷ್ಟಾಚಾರವೆಂದು ತಿಳಿಯಬೇಕು. ರಾಜಪದವಿಯನ್ನು ಮುಕ್ತಿ ಮತ್ತು ರಾಜನ ಹತ್ತಿರ ಸದಾ ಇರುವುದನ್ನೇ ಉಚ್ಚಶ್ರೇಣಿಯ ವಿಶುದ್ಧ ಪ್ರೇಮವೆಂದು ತಿಳಿದುಕೊಳ್ಳಬೇಕು.

ಈ ದೃಷ್ಟಾಂತದಿಂದ ನಾವು ಅಹಂಕಾರ, ಮಮತೆ, ಆಸಕ್ತಿ, ಮತ್ತು ಸ್ವಾರ್ಥವನ್ನು ತ್ಯಜಿಸಿ ಶ್ರದ್ಧಾ, ಭಕ್ತಿ ಮತ್ತು ವಿನಯಪೂರ್ವಕ ನಿಷ್ಕಾಮಭಾವದಿಂದ ಭಗವಂತನ ದಾಸಾನುದಾಸನ ಸಂಗ ಮತ್ತು ಸೇವೆ ಮಾಡುತ್ತಾ ಭಗವದಾಜ್ಞೆಯನ್ನು ಪಾಲಿಸುವುದು ಹಾಗೂ ಮುಕ್ತಿಯನ್ನೂ ಸಹ ಇಚ್ಛಿಸದೆ ನಿಷ್ಕಾಮ ಪ್ರೇಮದಿಂದ ಭಗವಂತನ ಸಮೀಪದಲ್ಲಿ ಸದಾ ಇದ್ದು ನಿರಂತರ ಭಗವಂತನ ಸ್ಮರಣೆ ಮಾಡಿಕೊಳ್ಳುತ್ತಾ ಸೇವೆ ಮಾಡುವುದನ್ನು ಕಡ್ಡಾಯವಾಗಿಟ್ಟುಕೊಳ್ಳಬೇಕು ಎಂಬ ಪಾಠವನ್ನು ಕಲಿಯಬೇಕು.



# ೩. ಗೀತೆಯ ಶ್ಲೋಕದ ಅರ್ಥ ಮತ್ತು ರಹಸ್ಯ ಬಯಲು

ಬಹಳ ಸಂತೋಷೀ, ಸದಾಚಾರೀ ಮತ್ತು ವಿದ್ವಾಂಸನಾದ ಒಬ್ಬ ಬ್ರಾಹ್ಮಣನಿದ್ದನು, ಆದರೆ ಆತ ಕಡು ಬಡವ, ಆತನ ಪತ್ನಿ ಬಹಳ ಪತಿವ್ರತೆ, ವಿದುಷೀ, ತತ್ತ್ವಜ್ಞಾನ ಸಂಪನ್ನಳೂ ಮತ್ತು ಜೀವನ್ಮುಕ್ತಳೂ ಆಗಿದ್ದಳು. ಆ ದೇಶದ ರಾಜನೂ ತತ್ತ್ವಜ್ಞಾನಿ, ಜೀವನ್ಮುಕ್ತ, ಮಹಾತ್ಮನಾಗಿದ್ದನು. ಬ್ರಾಹ್ಮಣನ ಪತ್ನಿಯು ಒಂದು ದಿನ ಹೀಗೆ ಯೋಚಿಸಿದಳು. ನನ್ನ ಪತಿದೇವ ಸಂತೋಷಿ, ಸದಾಚಾರಿ ಮತ್ತು ವಿದ್ವಾಂಸ ರಾಗಿದ್ದಾರೆ, ಆದುದರಿಂದ ಅವರು ಮುಕ್ತಿಗೆ ಅಧಿಕಾರಿಯೆನೋ ಆಗಿದ್ದಾರೆ. ನಮ್ಮ ಜೀವನ್ಮುಕ್ತ ರಾಜನೊಡನೆ ಇವರುಭೇಟಿಯಾದರೆ ಇವರೂ ಶೀಘ್ರವಾಗಿ ತತ್ತ್ವಜ್ಞಾನಿ ಜೀವನ್ಮುಕ್ತರಾಗಬಹುದು. ಹೀಗೆ ಯೋಚಿಸಿ ಆಕೆಯು ಪತಿಯಲ್ಲಿ ಪ್ರಾರ್ಥಿಸಿ ಕೊಂಡಳು–'ಪತಿದೇವ ! ಈಗ ನಮ್ಮ ಜೀವನೋಪಾಯಕ್ಕೆ ಬಹಳ ಕಷ್ಟವಾಗಿದೆ ಮತ್ತು ಸಂಪಾದನೆಗೆ ಯಾವ ದಾರಿಯೂ ಕಾಣುತ್ತಾ ಇಲ್ಲ. ಇಲ್ಲಿನ ರಾಜನು ಬಹಳ ಸದಾಚಾರಿ. ಜೀವನ್ಮುಕ್ತ ಮಹಾತ್ಮ ಮತ್ತು ಬ್ರಾಹ್ಮಣರ ಆದರ ಸತ್ಕಾರ ಮಾಡುವವನು ಹಾಗೂ ಪರಮ ಉದಾರಿ ಎಂದು ಕೇಳಿದ್ದೇನೆ. ನೀವು ಆತನನ್ನು ಒಂದು ಸಲ ಭೇಟಿಮಾಡಿದರೆ ಆತನು ನಿಮಗೆ ಉಚಿತ ಸತ್ಕಾರ

ಮಾಡುತ್ತಾನೆ ಮತ್ತು ಶಾಸ್ತ್ರವಿಧಿಗೆ ಅನುಸಾರವಾಗಿ ರಾಜನು ಬ್ರಾಹ್ಮಣರಿಗೆ ಯಾಚಿಸದೇ ಏನಾದರೂ ಕೊಟ್ಟರೆ ಅದು ಬ್ರಾಹ್ಮಣನಿಗೆ ಅಮೃತಕ್ಕೆ ಸಮಾನ ಇದು ನಿಮಗೂ ಗೊತ್ತೇ ಇದೆ.

ಪಂಡಿತನು ಹೇಳಿದನು–'ನೀನು ಹೇಳುವುದು ಸರಿಯಾಗಿದೆ, ಆದರೆ ನಾನು ಯಾರಿಗಾದರೂ ಏನಾದರೂ ಉಪಕಾರಮಾಡದಿರುವವರೆಗೂ ಅಯಾಚಕ ವೃತ್ತಿಯಿಂದಲೂ ಕೇಳದೇ ಅವನಿಂದ ದಾನ ತೆಗೆದುಕೊಂಡು ಜೀವನ ನಡೆಸುವುದು ನಿಂದಾಸ್ಪದವೆಂದು ತಿಳಿಯುತ್ತೇನೆ; ಆದುದರಿಂದ ನಾನು ಹಾಗೆ ಮಾಡಲಾರೆ, ಬೇಕಾದರೆ ಹಸಿವಿನಿಂದ ಇರಲೂ ಸರಿ.'

ಬ್ರಾಹ್ಮಣ ಪತ್ನೀ ಹೇಳಿದಳು–'ನೀವು ವಿದ್ವಾಂಸರು, ರಾಜನಿಗೆ ಯಥೋಚಿತ ಉಪದೇಶ ಮಾಡಿ ಆತನಿಗೆ ಉಪಕಾರ ಮಾಡಬಹುದು.'

ಈ ಮಾತು ಪಂಡಿತನಿಗೂ ಸ್ವಲ್ಪ ಸರಿಯೆನಿಸಿತು; ಆದರೆ ಅವನ ಮನಸ್ಸು ರಾಜನ ಹತ್ತಿರ ಹೋಗಲು ಒಪ್ಪುತ್ತಿರಲಿಲ್ಲ. ಕೊನೆಗೆ ಪತ್ನಿಯ ಒತ್ತಾಯದಿಂದ ಅವನು ಒಪ್ಪಿ ರಾಜಸಭೆಗೆ ಹೋದನು. ಪಂಡಿತನ ಸದ್ಗುಣ ಮತ್ತು ಸದಾಚಾರಗಳ ಖ್ಯಾತಿ ದೇಶದಲ್ಲೆಲ್ಲಾ ಹರಡಿತ್ತು. ರಾಜನು ಪಂಡಿತನನ್ನು ಬಹುವಾಗಿ ಆದರಿಸಿ ಸತ್ಕರಿಸಿದನು. ಕುಶಲ ಕ್ಷೇಮ ಪ್ರಶ್ನೋತ್ತರದ ನಂತರ ರಾಜನು ಬಹಳಷ್ಟು ಸ್ವರ್ಣಮುದ್ರೆಗಳನ್ನು ತರಿಸಿ ಪಂಡಿತನಿಗೆ ಅರ್ಪಿಸಿದನು. ಪಂಡಿತನು ಅವುಗಳನ್ನು ಸ್ವೀಕರಿಸದೇ ಹೇಳಿದನು–'ರಾಜಾ! ನೀವು ಬಹಳ ಉದಾರಿಗಳು, ನನಗಿದು ಗೊತ್ತು. ಆದರೆ, ನನ್ನದೊಂದು ನಿಯಮವಿದೆ, ನಾನು ಯಾರಿಗೂ ಉಪಕಾರ ಮಾಡದ ಹೊರತು ಅವರಿಂದ ಅಯಾಚಿತ ರೂಪದಲ್ಲಿಯೂ ಸಹ ಹಣವನ್ನು ತೆಗೆದುಕೊಳ್ಳುವುದಿಲ್ಲ. ನೀವು ನನಗೆ ಏನಾದರೂ ಕೆಲಸ ವಹಿಸಿರಿ ಮತ್ತು ಅದರಿಂದ ನಾನು ನಿಮ್ಮನ್ನು ಸಂತೋಷಪಡಿಸಿದರೆ, ಅನಂತರ ನೀವೇನಾದರೂ ಕಿಂಚಿತ್ ಕೊಟ್ಟರೆ ಅದನ್ನು ತೆಗೆದುಕೊಳ್ಳಬಹುದು.'

ರಾಜನು ಹೇಳಿದನು–'ಪಂಡಿತರೇ! ಬಹಳ ಒಳ್ಳೆಯದು. ನೀವು ಸದಾಚಾರೀ ವಿದ್ವಾನ್ ಬ್ರಾಹ್ಮಣರು. ನಾನು ನಿಮ್ಮಿಂದ ಗೀತೆಯ ರಹಸ್ಯವನ್ನು ಕೇಳಲು ಇಚ್ಛಿಸುತ್ತೇನೆ.

ನೀವು ಕೃಪೆಯಿಟ್ಟು ನನಗೆ ಗೀತೆಯ ಹನ್ನೆರಡನೇ ಅಧ್ಯಾಯದ ಹದಿನಾರನೇ ಶ್ಲೋಕದ ಸ್ಪಷ್ಟವಾದ ಅರ್ಥವನ್ನು ಭಾವಸಹಿತ ತಿಳಿಸಿರಿ.'

ಪಂಡಿತನು ಮೊದಲು ಶ್ಲೋಕವನ್ನು ಓದಿದನು, ನಂತರ ಶಬ್ದಾರ್ಥ ಹೇಳಿದನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥**

ಯಾವ ಪುರುಷನು ಏನನ್ನೂ ಅಪೇಕ್ಷೆಪಡುವುದಿಲ್ಲವೋ, ಬಾಹ್ಯ ಅಂತರಂಗಗಳಿಂದ ಶುದ್ಧನೋ, ಚತುರನೋ, ಪಕ್ಷಪಾತವಿಲ್ಲದವನೋ ಮತ್ತು ದುಃಖಗಳಿಂದ ಬಿಡುಗಡೆಹೊಂದಿರುವನೋ, ಎಲ್ಲಾ ಕರ್ಮಗಳ ಕರ್ತೃತ್ವವನ್ನು ತ್ಯಾಗ ಮಾಡಿದವನೋ, ಆ ಭಕ್ತನೇ ನನಗೆ ಪ್ರಿಯನು.

ಅನಂತರ ಅವರು ಶ್ಲೋಕದ ಭಾವಾರ್ಥವನ್ನು ಈ ಪ್ರಕಾರ ತಿಳಿಸಿದರು, ಯಾರಿಗೆ ಯಾವ ರೀತಿಯಲ್ಲಿಯೂ ಸಹ ಇಚ್ಛೆ, ಆಸೆ ಮತ್ತು ಅಪೇಕ್ಷೆ ಇರುವುದಿಲ್ಲವೋ ಯಾರು ಆತ್ಮತೃಪ್ತನೋ ಮತ್ತು ಯಾರಿಗೆ ಯಾವುದರ ಚಿಂತೆಯೂ ಸಹ ಇಲ್ಲವೋ, ಅವನನ್ನು 'ಅನಪೇಕ್ಷ' ಎಂದು ಹೇಳುತ್ತಾರೆ.

ಯಾರ ಅಂತಃಕರಣ ಅತ್ಯಂತ ಪವಿತ್ರವೋ, ಯಾರ ಬಾಹ್ಯ ವ್ಯವಹಾರವೂ ಉದ್ವೇಗ ರಹಿತ, ಪವಿತ್ರ ಮತ್ತು ನ್ಯಾಯುಕ್ತವಾಗಿರುವುದೋ, ಯಾರ ದರ್ಶನ, ಸಂಭಾಷಣೆ, ಸ್ಪರ್ಶ ಮತ್ತು ವಾರ್ತಾಲಾಪದಿಂದಲೇ ಜನರು ಪವಿತ್ರರಾಗಿಬಿಡುವರೋ, ಅದು 'ಶುಚಿ.'

ಯಾವ ಮಹತ್ಕಾರ್ಯಕ್ಕೋಸ್ಕರ ಮನುಷ್ಯ ಶರೀರ ದೊರೆತಿದೆಯೋ, ಅದನ್ನು ಪಡೆದುಕೊಳ್ಳುವುದೇ ಅರ್ಥಾತ್ ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳುವುದೇ ಮನುಷ್ಯನ ಯಥಾರ್ಥ ದಕ್ಷತೆ, ಯಾರು ತನ್ನ ಕೆಲಸವನ್ನು ಮಾಡಿಕೊಳ್ಳುತ್ತಾನೆಯೋ, ಅವನನ್ನು 'ದಕ್ಷ' ಎಂದು ಹೇಳುತ್ತಾರೆ.

ಯಾರು ಸಾಕ್ಷಿ ಹೇಳುವಾಗ ಮತ್ತು ನ್ಯಾಯ ಅಥವಾ ಪಂಚಾಯಿತಿ ನಡೆಸುವ ಸಮಯದಲ್ಲಿ ಕುಟುಂಬ, ಮಿತ್ರ, ಬಂಧು ಇತ್ಯಾದಿ ದೃಷ್ಟಿಯಿಂದ ಅಥವಾ ರಾಗ,

ದ್ವೇಷ, ಲೋಭ, ಮೋಹ ಮತ್ತು ಭಯ ಇತ್ಯಾದಿಗಳಿಗೆ ವಶವರ್ತಿಯಾಗಿ ಯಾರಿಗೂ ಪಕ್ಷಪಾತ ಮಾಡುವುದಿಲ್ಲವೋ, ಯಾವಾಗಲೂ ಪಕ್ಷಪಾತರಹಿತನಾಗಿರುತ್ತಾನೆಯೋ, ಅವನನ್ನು 'ಉದಾಸೀನ' ಎಂದು ಹೇಳುತ್ತಾರೆ.

ಯಾವುದೇ ಪ್ರಕಾರದ ಅತ್ಯಧಿಕ ದುಃಖ ಅಥವಾ ದುಃಖಕ್ಕೆ ಕಾರಣ ದೊರಕಿದರೂ ಯಾರೂ ದುಃಖ ಪಡುವುದಿಲ್ಲವೋ ಅರ್ಥಾತ್ ಯಾರ ಅಂತಃಕರಣ ದಲ್ಲಿ ಎಂದಿಗೂ ಯಾವ ರೀತಿಯ ವಿಷಾದ, ದುಃಖ ಅಥವಾ ಶೋಕ ಉಂಟಾಗುವು ದಿಲ್ಲವೋ ಅವನೇ 'ಗತವ್ಯಥ.'

ಯಾರು ಬಾಹ್ಯ ಅಂತರಂಗಗಳ ಸಮಸ್ತ ಕರ್ಮಗಳನ್ನು ತ್ಯಾಗಮಾಡಿ ಕೇವಲ ಪ್ರಾರಬ್ಧದ ಮೇಲೆ ಅವಲಂಬಿತವಾಗಿರುತ್ತಾನೆಯೋ, ತನ್ನ ಸ್ವಾರ್ಥ ಸಾಧನೆಗಾಗಿ ಯಾವ ಕರ್ಮವನ್ನೂ ಮಾಡುವುದಿಲ್ಲವೋ, ತಾನಾಗಿಯೇ ಅಲ್ಪಸ್ವಲ್ಪ ದೊರಕಿದರೆ ಅದರಲ್ಲಿಯೇ ಸಂತುಷ್ಟನಾಗಿರುತ್ತಾನೆಯೋ ಹಾಗೂ ಪ್ರಾರಬ್ಧವಶಾತ್ ನಡೆಯುವ ಕ್ರಿಯೆಗಳಲ್ಲಿ ಕರ್ತೃತ್ವದ ಅಭಿಮಾನವಿರುವುದಿಲ್ಲವೋ, ಅಂತಹ ಬಾಹ್ಯ ಮತ್ತು ಅಂತರಂಗಗಳ ತ್ಯಾಗವನ್ನು 'ಸರ್ವಾರಂಭಪರಿತ್ಯಾಗೀ' ಎಂದು ಹೇಳುತ್ತಾರೆ.

ಪಂಡಿತರು ಮೇಲಿನ ಭಾವಾರ್ಥವನ್ನು ತಿಳಿಸಿದ ಮೇಲೆ ರಾಜನು ನಮ್ರತೆಯಿಂದ ಹೇಳಿದನು–'ಸ್ವಾಮಿ! ನೀವು ಬಹು ಸೊಗಸಾಗಿ ಅರ್ಥಮಾಡಿದಿರಿ. ನೀವು ಹೇಳಿದುದು ಪೂರ್ಣ ಯುಕ್ತಿ ಯುಕ್ತ ಮತ್ತು ಶಾಸ್ತ್ರಸಂಗತವಾಗಿದೆ. ಆದಾಗ್ಯೂ ನನ್ನದೊಂದು ಅನುಮಾನ ಹೀಗಿದೆ–ಶ್ಲೋಕದ ಅರ್ಥವನ್ನು ಬಹಳ ಸುಂದರವಾಗಿ ಮಾಡಿದರೂ ನೀವು ಇನ್ನೂ ಇದರ ರಹಸ್ಯವನ್ನು ಅರಿತುಕೊಂಡಿಲ್ಲ.' ಪಂಡಿತನು ಸಿಟ್ಟಿನಿಂದ ಹೇಳಿದನು–'ರಹಸ್ಯವನ್ನು ತಿಳಿದುಕೊಂಡಿಲ್ಲದಿದ್ದರೆ ಭಾವಸಹಿತ ಅರ್ಥವನ್ನು ಹೇಗೆ ತಿಳಿಸುತ್ತಿದ್ದೆನು. ನನಗೆ ಗೀತೆಯ ಐವತ್ತೆರಡು ಟೀಕೆಗಳು ಬಾಯಿಪಾಠವಾಗಿದೆ. ಇದಲ್ಲದೆ ಯಾವುದಾದರೂ ವಿಶೇಷ ರಹಸ್ಯವಿದ್ದರೆ ಮತ್ತು ಅದನ್ನು ನೀವು ತಿಳಿದುಕೊಂಡಿದ್ದರೆ ನೀವೇ ಹೇಳಿರಿ.'

ರಾಜನು ಇದಕ್ಕೆ ಉತ್ತರವೀಯದೆ ಬಹು ವಿನಯದಿಂದ ಹೇಳಿದನು– 'ಪಂಡಿತರೇ ! ನನಗೆ ನಿಮ್ಮ ಶಾಸ್ತ್ರಸಮ್ಮತವಾದ ಸುಂದರ ವ್ಯಾಖ್ಯೆಯಿಂದ ಬಹು

ಸಂತೋಷವಾಯಿತು, ನಾನು ನಿಮಗೆ ಬಹಳ ಕೃತಜ್ಞನಾಗಿದ್ದೇನೆ. ಆದ್ದರಿಂದ ನಾನು ಕೊಡುವ ಪುರಸ್ಕಾರವನ್ನು ನೀವು ದಯವಿಟ್ಟು ಸ್ವೀಕಾರಮಾಡಬೇಕು.'

ಪಂಡಿತ ಹೇಳಿದನು-'ರಾಜಾ! ನನ್ನನ್ನು ರಹಸ್ಯ ತಿಳಿಯದವನೆಂದು ನೀವು ಹೇಳುತ್ತಿರುವಾಗ, ನಿಮಗೆ ಸಂತೋಷವಾಗಿರುವ ಮಾತೆಲ್ಲಿದೆ, ಇದಾದರೋ ಹೇಳಿಕೊಳ್ಳಲು ಮಾತ್ರ ಸಂತೋಷವಾಗಿದೆ. ನಿಮಗೆ ನಿಜವಾದ ಸಂತೋಷ ವುಂಟಾಗುವವರಗೆ ನಾನು ನಿಮ್ಮಿಂದ ಏನನ್ನೂ ತೆಗೆದುಕೊಳ್ಳಲು ಬಯಸುವುದಿಲ್ಲ.' ರಾಜನು ಬಹಳ ಅನುನಯ ವಿನಯದಿಂದ ಕೇಳಿಕೊಂಡರೂ ಪಂಡಿತನು ಪುರಸ್ಕಾರವನ್ನು ಸ್ವೀಕರಿಸದೆ ಮನೆಗೆ ಬಂದನು. ಆಗ ರಾಜನು ಒಬ್ಬ ನಂಬಿಕೆಗೆ ಪಾತ್ರನಾದ ಗುಪ್ತಚಾರನನ್ನು ಕರೆಸಿ ಹೇಳಿದನು-'ಈ ಬ್ರಾಹ್ಮಣನು ಬಹ ತ್ಯಾಗಿ, ಸದಾಚಾರಿ ಮತ್ತು ಸ್ವಾಭಿಮಾನಿಯಾದ ವಿದ್ವಾಂಸರು, ನೀನು ಅವರ ಹಿಂದೆ ಹೋಗಿ ನೋಡು, ಮನೆಯಲ್ಲಿ ಇವರ ವ್ಯವಹಾರ ಎಂತಹುದು ಮತ್ತು ವಾರ್ತಾಲಾಪಗಳು ಹೇಗೆ ನಡೆಯುತ್ತವೆ? ನಂತರ ಅದರ ಸೂಚನೆಯನ್ನು ನನಗೆ ಕೊಡು.' ರಾಜನ ಆದೇಶದಂತೆ ಗುಪ್ತಚರನು ಆತನ ಹಿಂದೆ ತೆರಳಿದನು, ಅಲ್ಲಿ ಅವರೆಲ್ಲರ ವ್ಯವಹಾರ- ವಾರ್ತಾಲಾಪಗಳನ್ನು ನಿರೀಕ್ಷಿಸಿದನು.

ಪಂಡಿತನು ಮನೆಗೆ ಹಿಂದಿರುಗಿ ಬಂದಾಗ ಪತ್ನಿಯು ಕೇಳಿದಳು. ರಾಜಸಭೆಯಲ್ಲಿ ನಡೆದ ಕಥೆಯನ್ನೆಲ್ಲಾ ಸಾಂಗೋಪಾಂಗವಾಗಿ ಆಕೆಗೆ ಹೇಳಿದನು. ಪತ್ನಿಯು ವಿನಯ ಮತ್ತು ಪ್ರೇಮದಿಂದ ಹೇಳಿದಳು-'ಸ್ವಾಮಿ! ರಾಜನು ಹೇಳಿರುವುದು ಉಚಿತವೆಂದೇ ತಿಳಿಯುತ್ತದೆ, ನೀವು ಕೋಪಮಾಡಿಕೊಳ್ಳ ಬಾರದಾಗಿತ್ತು.'

ಪಂಡಿತ-(ಸ್ವಲ್ಪ ಮಟ್ಟಿನ ಕ್ರೋಧಾವೇಶಪೂರಿತನಾಗಿ ಮತ್ತು ದುಃಖಿಯಾಗಿ) ಓಹೋ! ನೀನೂ ಸಹ ರಾಜನ ಮಾತನ್ನೇ ಸಮರ್ಥಿಸುತ್ತಿರುವೆ.

ಪತ್ನಿ-ನಾಥ ! ನೀವೇ ನ್ಯಾಯವಾದ ಮಾತನ್ನು ಸಮರ್ಥಿಸಬೇಕೆಂದು ಹೇಳುವಿರಿ.

ಪಂಡಿತ-(ಮತ್ತಷ್ಟು ಉತ್ತೇಜಿತನಾಗಿ ತಕ್ಷಣ ಆಕೆಯ ಮಾತನ್ನು ಖಂಡಿಸುತ್ತಾ)

ಏನು ರಾಜನು ಹೀಗೆ ಹೇಳುವುದು ನ್ಯಾಯಯುಕ್ತವೇ ನನ್ನ ವ್ಯಾಖ್ಯಾನವೇನೋ ಸುಂದರವಾಗಿದೆಯಂತೆ, ಆದರೆ ನನಗೆ ಅದರ ರಹಸ್ಯ ತಿಳಿಯದಂತೆ?

ಪತ್ನಿ–ತಾವು ಕ್ಷಮಿಸಬೇಕು. ರಾಜನ ಮಾತೇನೋ ಬಹಳ ಸರಿಯಾಗಿದೆ. ಯಾವುದೇ ಶ್ಲೋಕದ ವ್ಯಾಖ್ಯೆ ಮಾಡುವುದು ಸಹಜ, ಆದರೆ ಅದರ ಯಥಾರ್ಥ ರಹಸ್ಯವನ್ನು ತಿಳಿದುಕೊಳ್ಳುವುದು ಬಹಳ ಕಠಿಣವೇ.

ಪಂಡಿದ – ಹೇಗೆ?

ಪತ್ನಿ – ಗ್ರಾಮಾಫೋನಿನ ಮೇಲೆ ಯಾವ ತಟ್ಟೆಯನ್ನು ಹಾಕಲಾಗುವುದೋ ಅದು ಅದನ್ನೇ ಹಾಡುತ್ತದೆ, ಆದರೆ ಅದರ ರಹಸ್ಯವನ್ನು ಅದು ಸ್ವಲ್ಪವೇ ತಿಳಿಯುತ್ತದೆ.

ಪಂಡಿತ – ಹಾಗಾದರೆ ನಾನು ಗ್ರಾಮಾಫೋನಿನಂತೆ ಎಂದು ನಿನ್ನ ಅಭಿಪ್ರಾಯವೇ?

ಪತ್ನಿ – ಯಾರು ಇತರರಿಗೆ ಉಪದೇಶ–ಆದೇಶವನ್ನು ಬಹು ಚೆನ್ನಾಗಿ ಕೊಡುತ್ತಾನೆಯೋ, ಆದರೆ ಸ್ವತಃ ತನ್ನಲ್ಲಿ ಅವುಗಳ ಚರಿತಾರ್ಥವಾಗಿರುವುದಿಲ್ಲವೋ, ನೀವೇ ಹೇಳಿ, ಗ್ರಾಮಫೋನು ಮತ್ತು ಅವನಲ್ಲಿ ಯಾವ ವ್ಯತ್ಯಾಸವಿದೆ? ರಾಜನು ಕೇಳಿದ ಸಲುವಾಗಿ ನೀವು ಶ್ಲೋಕದ ವ್ಯಾಖ್ಯಾನ ಮಾಡಿದಿರಿ, ಆ ಎಲ್ಲಾ ವಿಚಾರಗಳೂ ನಿಮ್ಮಲ್ಲಿ ಚರಿತಾರ್ಥವಾಗಿವೆಯೇನು?

ಪಂಡಿತ – ಏಕಿಲ್ಲ? ಯಾವ ವಿಚಾರ ನನ್ನಲ್ಲಿಲ್ಲ?

ಪತ್ನಿ – ನೀವು ಶಾಂತಿಯಿಂದ ನನ್ನ ಅರಿಕೆಯನ್ನು ಕೇಳಿರಿ. ನನ್ನದೊಂದು ಪ್ರಾರ್ಥನೆ; ನೀವು ಆ ಶ್ಲೋಕದ ಪ್ರತಿಯೊಂದು ಪದದ ಅರ್ಥವನ್ನು ಪುನಃ ನನಗೆ ಹೇಳಿರಿ. ‘ಅನಪೇಕ್ಷ’ ಇದರ ಭಾವಾರ್ಥವೇನು?

ಪಂಡಿತ – ಯಾರಿಗೆ ಯಾವುದೇ ಬಗೆಯ ಇಚ್ಛೆ , ಆಸೆ ಮತ್ತು ಆಕಾಂಕ್ಷೆಗಳು ಇಲ್ಲವೋ, ಯಾರು ಆತ್ಮ ತೃಪ್ತನೋ ಮತ್ತು ಯಾರಿಗೆ ಯಾವುದೇ ವಿಚಾರದ ಬಗ್ಗೆ ಚಿಂತೆಯಿಲ್ಲವೋ, ಅವನನ್ನು ‘ಅನಪೇಕ್ಷ’ ಎಂದು ಹೇಳುತ್ತಾರೆ.

ಪತ್ನಿ – ನೀವು ಅವರಂತೆ ಇರುವಿರೇನು?

ಪಂಡಿತ – ಏಕಿಲ್ಲ? ನನಗೆ ಯಾವುದೇ ಇಚ್ಛೆ, ಆಸೆ, ಆಕಾಂಕ್ಷೆ ಇಲ್ಲ,

ನಾನು ನಿನ್ನ ಹೇಳಿಕೆಯ ಮೇಲೆ ರಾಜನ ಬಳಿ ಹೋದೆ ಮತ್ತು ರಾಜನು ಅನುನಯ-ವಿನಯದಿಂದ ಕೇಳಿಕೊಂಡರೂ ನಾನು ಅವನಿಂದ ಏನನ್ನೂ ತೆಗೆದುಕೊಳ್ಳಲಿಲ್ಲ.

ಪತ್ನಿ – ಬಹಳ ಒಳ್ಳೆಯದು! ನಿಜ, ನೀವು ನಾನು ಕೇಳಿಕೊಂಡಿದ್ದರಿಂದ ಹೋಗಿದ್ದಿರಿ. ಇದು ನನ್ನ ಮೇಲಿರುವ ನಿಮ್ಮ ದಯೆ, ಒಳ್ಳೆಯದು, 'ಶುಚಿ' ಎಂಬುದರ ಅರ್ಥವೇನು?

ಪಂಡಿತ – ಯಾರ ಅಂತಃಕರಣ ಅತ್ಯಂತ ಪವಿತ್ರವಾಗಿದೆಯೋ, ಯಾರ ಹೊರಗಿನ ವ್ಯವಹಾರಗಳೂ ಉದ್ವೇಗ ರಹಿತ, ಪವಿತ್ರ ಮತ್ತು ನ್ಯಾಯಯುಕ್ತವಾಗಿವೆಯೋ, ಯಾರ ದರ್ಶನ, ಭಾಷಣ, ಸ್ಪರ್ಶ, ವಾರ್ತಾಲಾಪ ಮಾಡುವುದರಿಂದ ಮನುಷ್ಯನು ಪವಿತ್ರನಾಗುವನೋ, ಅವನು 'ಶುಚಿ'.

ಪತ್ನಿ – ನೀವು ಬಾಹ್ಯ ಅಂತರಂಗಗಳಲ್ಲಿ ಈ ಪ್ರಕಾರ ಶುದ್ಧವಾಗಿರುವಿರಾ?

ನಿಮ್ಮ ದರ್ಶನ, ಭಾಷಣ, ಸ್ಪರ್ಶ, ವಾರ್ತಾಲಾಪ ಮಾಡುವುದರಿಂದ ಮನುಷ್ಯ ಪವಿತ್ರನಾಗುತ್ತಾನೆಯೇ? ನಿಮ್ಮ ಅಂತಃಕರಣದಲ್ಲಿ ಯಾವ ವಿಕಾರವೂ ಉಂಟಾಗುವು ದಿಲ್ಲವೇ? ನಿಮ್ಮ ಬಾಹ್ಯ ವ್ಯವಹಾರ ಉದ್ವೇಗರಹಿತ, ನ್ಯಾಯಯುಕ್ತ ಮತ್ತು ಪವಿತ್ರವಾಗಿದೆಯೇ? ಒಂದು ವೇಳೆ ಹಾಗಿರುವುದಾದರೆ ನಿಮ್ಮ ಮನಸ್ಸಿನಲ್ಲಿ ಕ್ರೋಧ ಹಾಗೂ ಉದ್ವೇಗ ಏಕೆ ಉಂಟಾದವು ಮತ್ತು ರಾಜನ ಸಂಗಡ ನೀವು ಅಹಂಕಾರದ ಮಾತುಗಳನ್ನು ಏಕೆ ಹೇಳಿದಿರಿ?

ಪಂಡಿತ – (ಅಂಜಿಕೆಯಿಂದ) ಸರಿ, ಈ ಗುಣದ ಕೊರತೆ ನನ್ನಲ್ಲಿದೆ.

ಪತ್ನಿ – ಒಳ್ಳೆಯದು, 'ದಕ್ಷ' ಇದರ ಭಾವವನ್ನು ನೀವು ಹೇಗೆ ತಿಳಿಸಿದರಿ?

ಪಂಡಿತ – ಯಾವ ಮಹತ್ಕಾರ್ಯಕ್ಕಾಗಿ ಮನುಷ್ಯ ಶರೀರ ದೊರೆತಿದೆಯೋ, ಅದನ್ನು ಪಡೆಯುವುದು ಅರ್ಥಾತ್ ಭಗವಂತನ ಸಾಕ್ಷಾತ್ಕಾರವನ್ನು ಪಡೆದು ಕೊಳ್ಳುವುದೇ ಮನುಷ್ಯನ ಯಥಾರ್ಥವಾದ ದಕ್ಷತೆ. ಯಾರು ತನ್ನ ಕಾರ್ಯವನ್ನು ಮಾಡಿಕೊಳ್ಳುತ್ತಾನೆಯೋ, ಅವನನ್ನೇ 'ದಕ್ಷ' ಎಂದು ಹೇಳುತ್ತಾರೆ.

ಪತ್ನಿ – ಹಾಗಾದರೆ, ನೀವು ಯಾವ ಮಹತ್ಕಾರ್ಯಕ್ಕಾಗಿ ಪ್ರಪಂಚಕ್ಕೆ

ಬಂದಿದ್ದಿರೋ, ಅದನ್ನು ಪೂರ್ಣಗೊಳಿಸಿಬಿಟ್ಟಿರಾ? ನೀವು ಪರಮಪದವನ್ನು ಪಡೆದುಕೊಂಡಿರಾ? ಇಲ್ಲದಿದ್ದರೆ, ರಾಜನು ಹೇಳಿದ್ದು ಉಚಿತವೇ ಆಗಿದೆ.

ಪಂಡಿತ – ನೀನು ಹೇಳುವುದು ನಿಜ. ನನ್ನಲ್ಲಿ ಈ ಗುಣವೂ ಇಲ್ಲ.

ಪತ್ನಿ – 'ಉದಾಸೀನ' ಎಂಬ ಪದದ ಅಭಿಪ್ರಾಯವೇನು?

ಪಂಡಿತ – ಯಾರು ಸಾಕ್ಷಿ ಹೇಳುವಾಗ, ನ್ಯಾಯ ಅಥವಾ ಪಂಚಾಯಿತಿ ನಡೆಸುವ ಸಮಯದಲ್ಲಿ ಕುಟುಂಬೀ ಮಿತ್ರ, ಬಂಧು ಇತ್ಯಾದಿ ದೃಷ್ಟಿಯಿಂದ ಅಥವಾ ರಾಗ, ದ್ವೇಷ, ಲೋಭ, ಮೋಹ ಮತ್ತು ಭಯ ಮುಂತಾದವುಗಳ ವಶವರ್ತಿಯಾಗಿ ಯಾರಿಗೂ ಪಕ್ಷಪಾತ ಮಾಡದೇ, ಯಾವಾಗಲೂ ಪಕ್ಷಪಾತರಹಿತನಾಗಿರುತ್ತಾನೆಯೋ, ಅವನನ್ನು 'ಉದಾಸೀನ' ಎಂದು ಹೇಳುತ್ತಾರೆ.

ಪತ್ನಿ – ನೀವು ಪಕ್ಷಪಾತವಿಲ್ಲದವರಾಗಿ ಇರುವಿರಾ? ನೀವು ರಾಜನ ಎದುರಿಗೆ ನಿಮ್ಮ ಪಕ್ಷವನ್ನು ಸಮರ್ಥಿಸಿಕೊಳ್ಳಲಿಲ್ಲವೇ? ನೀವು ಶ್ಲೋಕದ ರಹಸ್ಯವನ್ನು ತಿಳಿದುಕೊಂಡಿಲ್ಲ–ಎಂಬ ರಾಜನ ಮಾತಿನ ಬಗ್ಗೆ ನೀವು ಗಂಭೀರವಾಗಿ ಗಮನವಿಟ್ಟು ಯೋಚಿಸಿದರಾ? ಇಲ್ಲವಾದರೆ, ರಾಜನು ಹೇಳಿರುವುದು ಏಕೆ ಉಚಿತವಲ್ಲ?

ಪಂಡಿತ – (ಸರಳ ಮತ್ತು ಶುದ್ಧ ಹೃದಯದಿಂದ ತನ್ನಲ್ಲಿರುವ ಕೊರತೆಯನ್ನು ವಿನಮ್ರಭಾವದಿಂದ ಒಪ್ಪಿಕೊಳ್ಳುತ್ತಾ) ನೀನು ನಿಜವನ್ನೇ ಹೇಳಿದೆ. ನಿಜವಾಗಿಯೂ, ನೀನು ಇಂದು ನನ್ನ ಕಣ್ಣುಗಳನ್ನು ತೆರೆಯಿಸಿದೆ. ಪಕ್ಷಪಾತರಹಿತನಾಗಿರುವುದರಲ್ಲಿ ನನ್ನಲ್ಲಿ ಬಹಳ ಅಭಾವವಿದೆ. ಎಲ್ಲಿಯಾದರೂ ವಾದ–ವಿವಾದ ನಡೆಯುತ್ತಿದ್ದರೆ ನಾನು ನನ್ನ ಪಕ್ಷವು ದುರ್ಬಲವೆಂದು ತಿಳಿದೂ ಸಹ ನನ್ನ ಪಕ್ಷದ ದುರಾಗ್ರಹವನ್ನು ಬಿಡುವುದಿಲ್ಲ.

ಪತ್ನಿ – ಸರಿ ಸರಿ, 'ಗತವ್ಯಥ' ಎಂಬುದಕ್ಕೆ ನಿಮ್ಮದು ಯಾವ ಅರ್ಥ?

ಪಂಡಿತ – ಯಾವುದೇ ಪ್ರಕಾರದ ಅತ್ಯಧಿಕ ದುಃಖ ಅಥವಾ ದುಃಖಕ್ಕೆ ಕಾರಣ ಸಂಭವಿಸಿದರೂ ಯಾರು ದುಃಖಪಡುವುದಿಲ್ಲವೋ ಅರ್ಥಾತ್ ಯಾರ ಅಂತಃಕರಣದಲ್ಲಿ ಎಂದಿಗೂ ಯಾವುದೇ ರೀತಿಯ ವಿಷಾದ, ದುಃಖ ಅಥವಾ ಶೋಕವುಂಟಾಗುವುದಿಲ್ಲವೋ, ಅವನೇ 'ಗತವ್ಯಥ'.

ಪತ್ನಿ – ನಿಮ್ಮ ಚಿತ್ತದಲ್ಲಿ ಯಾವ ವ್ಯಥೆಯೂ ಇಲ್ಲವೇನು? ಇಲ್ಲದೆ ಹೋಗಿದ್ದರೆ, ರಾಜನ ಮಾತುಗಳಿಂದ ಮತ್ತು ನಾನು ಅದನ್ನು ಸಮರ್ಥನೆ ಮಾಡಿದುದರಿಂದ ನಿಮಗೆ ಇಷ್ಟೊಂದು ಉದ್ವೇಗ ಮತ್ತು ವ್ಯಥೆ ಏಕೆ ಉಂಟಾಗಬೇಕಾಗಿತ್ತು?

ಪಂಡಿತ – ನೀನು ಹೇಳುವುದು ಸತ್ಯ. ಈ ಭಾವ ನನ್ನಲ್ಲಿ ಖಂಡಿತವಾಗಿ ಇಲ್ಲ. ಮನಸ್ಸಿಗೆ ವಿರುದ್ಧವಾದರೆ ಪ್ರತಿಯೊಂದು ಪದಕ್ಕೂ ಕೇವಲ ವ್ಯಥೆಯೇ ಅಲ್ಲ ಭಯ, ಉದ್ವೇಗ, ಅಸೂಯೆ, ಶೋಕ ಮುಂತಾದ ವಿಕಾರಗಳೂ ಸಹ ನನ್ನಲ್ಲಿ ಕಂಡುಬರುತ್ತಿವೆ.

ಪತ್ನಿ – ಒಳ್ಳೆಯದು, 'ಸರ್ವಾರಂಭಪರಿತ್ಯಾಗೀ' ಎಂಬುದರಿಂದ ನೀವು ಏನು ತಿಳಿದುಕೊಳ್ಳುವಿರಿ?

ಪಂಡಿತ – ಯಾರು ಬಾಹ್ಯ–ಅಂತರಂಗಗಳ ಸಮಸ್ತ ಕರ್ಮಗಳನ್ನು ತ್ಯಾಗಮಾಡಿ ಕೇವಲ ಪ್ರಾರಬ್ಧವನ್ನೇ ಅವಲಂಬಿಸಿರುತ್ತಾನೆಯೋ, ತನ್ನ ಸ್ವಾರ್ಥದ ಸಿದ್ಧಿಗಾಗಿ ಯಾವ ಕರ್ಮವನ್ನು ಮಾಡುವುದಿಲ್ಲವೋ ಹಾಗೂ ಪ್ರಾರಬ್ಧವಶದಿಂದ ನಡೆಯುವ ಕ್ರಿಯೆಗಳಲ್ಲಿ ಯಾರಿಗೆ ಕರ್ತೃತ್ವದ ಅಭಿಮಾನವಿರುವುದಿಲ್ಲವೋ ಅಂತಹ ಬಾಹ್ಯ ಮತ್ತು ಅಂತರಂಗಗಳ ತ್ಯಾಗಿಯನ್ನು 'ಸರ್ವಾರಂಭಪರಿತ್ಯಾಗೀ' ಎನ್ನುತ್ತಾರೆ.

ಪತ್ನಿ – ಬಹಳ ಸೊಗಸಾದ ವ್ಯಾಖ್ಯೆ, ಆದರೆ ಹೇಳಿ, ನೀವೂ ಸಹ ಬಾಹ್ಯ ಮತ್ತು ಅಂತರಂಗದಿಂದ ಎಲ್ಲಾ ಕರ್ಮಗಳ ತ್ಯಾಗ ಮಾಡಿರುವಿರೇನು? ಮತ್ತು ನಿಮ್ಮ ಅಂತಃಕರಣದಲ್ಲಿ ಯಾವ ಸಾಂಸಾರಿಕ ಸಂಕಲ್ಪಗಳೂ ಉಂಟಾಗುವುದಿಲ್ಲವೇ? ಇಲ್ಲವೆಂದಾದರೆ, ನಿಮಗೆ ಇಷ್ಟೊಂದು ಅಹಂಕಾರವೇಕೆ? ಹೊರಗಡೆಯಿಂದ ಲಾದರೋ ನೀವು ಎಲ್ಲಾ ಕರ್ಮಗಳನ್ನೂ ಮಾಡುತ್ತಲೇ ಇರುವಿರಿ.

ಪಂಡಿತ – 'ನಿಜ, ಈ ಮಾತು ನನ್ನಲ್ಲಿ ಖಂಡಿತವಾಗಿ ಸಂಭವಿಸುವುದಿಲ್ಲ. ನಾನು ನನ್ನ ಎಲ್ಲಾ ಕೊರತೆಗಳನ್ನೂ ತಿಳಿದುಕೊಂಡೆನು. ನಿಜವಾಗಿಯೂ ನಾನು ಇದುವರೆವಿಗೂ ಗೀತೆಯ ಅರ್ಥಮಾಡುತ್ತಿದ್ದೆನು, ರಹಸ್ಯವನ್ನು ತಿಳಿಯಲಿಲ್ಲ. ಈಗ ಸ್ವಲ್ಪ– ಸ್ವಲ್ಪವಾಗಿ ತಿಳಿದುಬರುತ್ತಾ ಇದೆ. ಆದುದರಿಂದ ನೀನು ಅನುಮತಿ ಕೊಡು,

ಈಗ ನಾನು ಬಾಹ್ಯ ಮತ್ತು ಅಂತರಂಗಗಳಿಂದ ಸರ್ವಸ್ವವನ್ನೂ ತ್ಯಾಗಮಾಡಿ ನಿಜವಾಗಿ ಸನ್ಯಾಸಿಯಾಗಲು ಹೋಗುತ್ತೇನೆ' ಹೀಗೆ ಹೇಳಿ ಪಂಡಿತನು ಎಲ್ಲವನ್ನೂ ಬಿಟ್ಟು ಮನೆಯಿಂದ ಹೊರಟುಹೋಗಲು ಸಿದ್ಧನಾದನು.

ಪತ್ನಿಯು ಪ್ರಾರ್ಥಿಸಿಕೊಂಡಳು – ಸ್ವಾಮಿ! ನಾನೂ ಸಹ ನಿಮ್ಮೊಡನೆಯೇ ನಿಮ್ಮನ್ನು ಅನುಸರಿಸಲು ಹೊರಡುತ್ತೇನೆ.

ಪಂಡಿತ – ನಾನು ನನ್ನೊಡನೆ ಯಾವ ರಗಳೆಯನ್ನೂ ಇಟ್ಟುಕೊಳ್ಳಲು ಇಷ್ಟಪಡುವುದಿಲ್ಲ. ಅದರಲ್ಲೂ ಹೆಂಗಸನ್ನು ಇಟ್ಟುಕೊಳ್ಳುವುದಾದರೂ ಹೇಗೆ?

ಪತ್ನಿ – ನನ್ನನ್ನು ನೀವು ರಗಳೆಯೆಂದು ತಿಳಿಯದಿರಿ. ನಾನು ನಿಮ್ಮ ಸಾಧನೆಯಲ್ಲಿ ಯಾವ ವಿಘ್ನವನ್ನೂ ಉಂಟುಮಾಡುವುದಿಲ್ಲ. ನಾನು ಇಂದು ನಿಮ್ಮನ್ನು ರಾಜನ ಹತ್ತಿರಕ್ಕೆ ಕಳುಹಿಸಿದ್ದು ಹಣಕ್ಕಾಗಿಯಲ್ಲ. ಹಣವನ್ನು ನಾನು ಒಂದು ನಿಮಿತ್ತ ಮಾಡಿದೆನಷ್ಟೇ. ನೀವು ಜೀವನದ ಮುಖ್ಯ ಗುರಿಯನ್ನು ಮುಟ್ಟಲೆಂಬುದೇ ನನ್ನ ಉದ್ದೇಶವಾಗಿತ್ತು. ರಾಜನು ತತ್ತ್ವಜ್ಞ ಜೀವನ್ಮುಕ್ತ ಮಹಾಪುರುಷನಾಗಿದ್ದಾನೆ. ನೀವು ಧರ್ಮಜ್ಞ, ಸದಾಚಾರೀ ತ್ಯಾಗೀ, ಸಂತೋಷೀ, ವಿದ್ವಾಂಸರೇನೋ ಆಗಿರುವಿರಿ. ತತ್ತ್ವಜ್ಞನಾದ ರಾಜನ ಸಂಗದ ಪ್ರಭಾವದಿಂದ ನಿಮಗೆ ಪರಮಾತ್ಮನ ಸಾಕ್ಷಾತ್ಕಾರವೂ ಸಹ ಪ್ರಾಪ್ತಿಯಾಗುವುದು ಎಂಬ ಈ ಉದ್ದೇಶದಿಂದ ನಾನು ನಿಮ್ಮನ್ನು ಅಲ್ಲಿಗೆ ಕಳುಹಿಸಿದ್ದೆನು. ಈಗ ನಿಮ್ಮ ಅಪ್ಪಣೆಯಾದರೆ ನಾನೂ ಸಹ ನಿಮ್ಮೊಡನೆ ಬರಲಿಚ್ಛಿಸುತ್ತೇನೆ.

ಪಂಡಿತ – (ಕೃತಜ್ಞತೆಯಿಂದ) ನಾನು ಈಗ ಈ ಮಾತನ್ನು ತಿಳಿದುಕೊಂಡೆನು. ನಿಜವಾಗಿಯೂ ನಿನ್ನಿಂದ ಯಾವ ಹಾನಿಯೂ ಆಗದು. ನೀನೇ ನನಗೆ ನಿಜವಾದ ಉಪಕಾರ ಮಾಡುವ ಪರಮ ಸಹೃದಯಿಯಾಗಿರುವೆ. ತನ್ನ ಪ್ರಿಯ ಸಂಬಂಧಿಗೆ ಪರಮಾತ್ಮನನ್ನು ಪ್ರಾಪ್ತಿ ಮಾಡಿಕೊಳ್ಳುವುದಕ್ಕೆ ಸಹಾಯ ಮಾಡುವವರೇ ವಸ್ತುತಃ ನಿಜವಾದ ಸಹೃದಯಿಯಾಗಿರುತ್ತಾರೆ. ನಡೆ, ನೀನು ಅಲ್ಲಿಯೂ ಪರಮಾತ್ಮನ ಸಾಕ್ಷಾತ್ಕಾರದಲ್ಲಿ ನನಗೆ ಸಹಾಯವನ್ನೇ ಮಾಡುವೆ.

ಅನಂತರ ಅವರಿಬ್ಬರೂ ಸರ್ವಸ್ವವನ್ನೂ ತ್ಯಾಗಮಾಡಿ ಮನೆಯಿಂದ ಹೊರಟು

ಹೋದರು. ಇತ್ತ ಗುಪ್ತಚರನು ಅವರಿಬ್ಬರ ಪರಸ್ಪರ ಸಂಭಾಷಣೆಯನ್ನು ಕೇಳಿದನು ಮತ್ತು ನಡೆದ ಘಟನೆಯನ್ನೂ ನೋಡಿದನು. ಅವನು ಕೂಡಲೇ ರಾಜನ ಬಳಿಗೆ ಹೋಗಿ ಎಲ್ಲವನ್ನೂ ಯಥಾರ್ಥವಾಗಿ ಹೇಳಿಬಿಟ್ಟನು. ರಾಜನು ತನ್ನ ರಾಜ್ಯ, ಕೋಶ ಮುಂತಾದುವನ್ನು ತನ್ನ ಮಗನಿಗೆ ವಹಿಸಿಕೊಟ್ಟನು, ಈಗ ಗುಪ್ತಚರನ ಮಾತನ್ನು ಕೇಳಿ ಅವನೂ ರಾಜ್ಯವನ್ನು ಬಿಟ್ಟು ಹೊರಟನು. ಅವನಿಗೆ ದಾರಿಯಲ್ಲಿ ಎದುರಿಗೆ ಬರುತ್ತಿದ್ದ ಬ್ರಾಹ್ಮಣ ದಂಪತಿಗಳು ಸಿಕ್ಕಿದರು. ರಾಜನು ಉಲ್ಲಾಸದಿಂದ ಅವರಿಗೆ ಹೇಳಿದನು–'ಪಂಡಿತರೇ ! ಈಗ ನೀವು ಗೀತೆಯ ಆ ಶ್ಲೋಕದ ರಹಸ್ಯವನ್ನು ತಿಳಿದುಕೊಂಡಿರಿ.'

ಪಂಡಿತನು ನಮ್ರತೆಯಿಂದ ಉತ್ತರವಿತ್ತನು–'ಇನ್ನೂ ತಿಳಿದುಕೊಂಡಿಲ್ಲ, ತಿಳಿದುಕೊಳ್ಳುವುದಕ್ಕಾಗಿ ಹೋಗುತ್ತಿದ್ದೇನೆ'

ರಾಜನೂ ಅವರೊಡನೆಯೇ ಹೊರಟನು. ಮೂವರೂ ಏಕಾಂತವಾದ ಪವಿತ್ರ ಸ್ಥಳದಲ್ಲಿ ವಾಸಿಸಲಾರಂಭಿಸಿದರು. ರಾಜನು ಮತ್ತು ಬ್ರಾಹ್ಮಣನ ಪತ್ನೀ ತತ್ತ್ವಜ್ಞಾನಿ ಮತ್ತು ಜೀವನ್ಮುಕ್ತ ಮಹಾತ್ಮರೇ ಆಗಿದ್ದರು. ಅವರ ಸಂಗದ ಪ್ರಭಾವದಿಂದ ಪಂಡಿತನೂ ಪರಮಾತ್ಮನ ಸಾಕ್ಷಾತ್ಕಾರಮಾಡಿಕೊಂಡನು.

(ಈ ಕಥೆಯು ಗೀತೆಯ ಹನ್ನೆರಡನೇ ಅಧ್ಯಾಯದ ೧೬ನೇ ಶ್ಲೋಕದ ನಿವೃತ್ತಿಪರ ಅರ್ಥದಿಂದ ತಿಳಿಸಲ್ಪಟ್ಟಿದೆ. ಇದರ ಪ್ರವೃತ್ತಿಪರ ಅರ್ಥವು ಇದಕ್ಕೆ ಭಿನ್ನವಾಗಿದೆ.)

❑❑❑

# ೪. ಭಗವನ್ನಾಮ ಅಮೂಲ್ಯವಾದುದು

ಗೋಸ್ವಾಮಿ ತುಲಸೀದಾಸರು ತಮ್ಮ ರಾಮಚರಿತ ಮಾನಸದಲ್ಲಿ ಭಗವನ್ನಾಮದ ಮಹಿಮೆಯ ವರ್ಣನೆ ಮಾಡುತ್ತಾ ಹೀಗೆ ಹೇಳಿದ್ದಾರೆ–ಕಲಿಯುಗದಲ್ಲಿ ಕೇವಲ ಭಗವಂತನ ನಾಮವೇ ಆಧಾರವಾಗಿದೆ. ವೇಶ್ಯೆ ಮತ್ತು ಅಜಾಮಿಳರಂತಹ ಅತ್ಯಂತ ಪಾಪಿಗಳೂ ಕೇವಲ ನಾಮದ ಪ್ರಭಾವದಿಂದ ಸಹಜವಾಗಿಯೇ ಮುಕ್ತರಾಗಿ

ಹೋದರು. ಶ್ರೀಹನುಮಂತನೂ ಇದೇ ನಾಮದ ಪ್ರಭಾವದಿಂದ ಭಗವಾನ್ ಶ್ರೀರಾಮನನ್ನು ತನ್ನ ವಶಮಾಡಿಕೊಂಡಿದ್ದಾನೆ. ನಾಮವನ್ನು ನಾಲಿಗೆಯ ಮೇಲೆ ಇಟ್ಟುಕೊಂಡ ಮಾತ್ರದಿಂದಲೇ ಬಾಹ್ಯ ಮತ್ತು ಅಂತರಂಗಗಳಲ್ಲಿ ಪ್ರಕಾಶ ಹರಡಿಹೋಗುತ್ತದೆ. ನಾಮದ ಮಹಿಮೆ ಎಷ್ಟು ಅಧಿಕವಾಗಿದೆಯೆಂದರೆ ಸ್ವತಃ ಭಗವಂತನೂ ಸಹ ಅದರ ವರ್ಣನೆ ಮಾಡಲು ಅಸಮರ್ಥಗಿದ್ದಾನೆ-**'ರಾಮು ನ ಸಕಹಿ ನಾಮ ಗುನ ಗಾಈ'**, ಭಗವಾನ್ ಶಿವನು ಈ ನಾಮದ ಶಕ್ತಿಯಿಂದಲೇ ಕಾಶಿಯಲ್ಲಿ ಸಮಸ್ತ ಜೀವಿಗಳಿಗೆ ಮುಕ್ತಿ ದಯಪಾಲಿಸುತ್ತಿದ್ದಾನೆ. ಇದೇ ಪ್ರಕಾರ ಶ್ರೀಮದ್ಭಾಗವತ, ಮಹಾಭಾರತ ಮುಂತಾದ ಅನ್ಯ ಶಾಸ್ತ್ರವೂ ಸಹ ನಾಮ ಮಹಿಮೆಯಿಂದ ತುಂಬಿತುಳುಕುತ್ತಿವೆ. ಆದರೆ ಇದಕ್ಕೆ ಅನುಸಾರವಾಗಿ ನಾಮದ ಪ್ರತ್ಯಕ್ಷ ಪರಿಮಾಮ ಕಾಣಿಸುತ್ತಾ ಇಲ್ಲ ಇದಕ್ಕೆ ಕಾರಣವೇನು?

ಈ ಪ್ರಕಾರದ ತರ್ಕವನ್ನು ಮುಂದಿಡುತ್ತಾ ಅನೇಕ ಮಹಾನುಭಾವರು ಪ್ರಶ್ನೆಮಾಡುತ್ತಿರುತ್ತಾರೆ. ಇದಕ್ಕೆಲ್ಲಾ ಉತ್ತರ ಹೀಗಿದೆ; ಭಗವಂತನ ನಾಮದಲ್ಲಿ ಶ್ರದ್ಧೆಯ ಕೊರತೆಯಿರುವುದೇ ಪ್ರತ್ಯಕ್ಷ ಫಲ ಕಾಣಿಸದಿರುವುದಕ್ಕೆ ಕಾರಣವಾಗಿದೆ. ವಸ್ತುತಃ ಭಗವನ್ನಾಮದ ಮಹಿಮೆಯನ್ನು ಶಾಸ್ತ್ರಗಳು ತಿಳಿಸಿರುವುದಕ್ಕಿಂತಲೂ ಸಹ ಅದು ಎಷ್ಟೋ ಅಧಿಕವಾಗಿದೆ. ನಾಮ ಮಹಿಮೆಗೆ ಯಾವ ಎಲ್ಲೆಯೂ ಇಲ್ಲವೇ ಇಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ಮಹಿಮೆಯಾದರೋ ನಾಮದಿಂದ ಲಾಭ ಪಡೆದುಕೊಂಡ ಮಹಾತ್ಮರ ಉದ್ಗಾರವಾಗಿದೆ. ಈಶ್ವರ ಮತ್ತು ಸತ್ಸಂಗದ ಮಹಿಮೆಯನ್ನು ಎಷ್ಟು ಹೇಳಿದರೂ ಅಷ್ಟೂ ತೀರಾ ಸ್ವಲ್ಪವೇ, ಅದೇ ಪ್ರಕಾರ ನಾಮದ ಮಹಿಮೆಯನ್ನು ಎಷ್ಟು ವರ್ಣಿಸಲಾಗಿದೆಯೋ ಅಷ್ಟೂ ಸ್ವಲ್ಪವೇ ಆಗಿದೆ, ಮೂಲತಃ ಭಗವನ್ನಾಮದ ತತ್ತ್ವ, ರಹಸ್ಯ,ಗುಣ, ಪ್ರಭಾವ ಮುಂತಾದುವನ್ನು ತಿಳಿದುಕೊಳ್ಳದ ಕಾರಣದಿಂದಲೇ ಅದರ ಬಗ್ಗೆ ಶ್ರದ್ಧೆಯಲ್ಲಿ ಕೊರತೆಯಿದೆ. ಶ್ರದ್ಧೆಯ ಅಭಾವದಿಂದ ಹಾಗೂ ಕೆಲವು ಸಲ ಶ್ರದ್ಧೆಗೆ ಪೂರ್ಣ ವಿರುದ್ಧವಾಗಿ ಅಶ್ರದ್ಧೆಯ ಕಾರಣದಿಂದ ಮನುಷ್ಯನು ಯಥಾರ್ಥ ಲಾಭದಿಂದ ವಂಚಿತನಾಗಬೇಕಾಗುತ್ತದೆ. ನಾಮಕ್ಕೇನೋ ಅಮಿತ ಮಹಿಮೆಯಿದೆ. ಪ್ರಪಂಚದ ಯಾವುದೇ ಪದಾರ್ಥದೊಡನೆ ಭಗವನ್ನಾಮದ ಹೋಲಿಕೆ ಅಸಾಧ್ಯ.

ಇಲ್ಲಿನ ಜಡ ಮತ್ತು ನಾಶಯುಕ್ತ ಪದಾರ್ಥಗಳೊಡನೆ ಭಗವಂತನ ನಾಮವನ್ನು ತುಲನೆ ಮಾಡುವುದು ನಮ್ಮ ಅಜ್ಞಾನದ ಪರಿಚಯಮಾಡಿಕೊಟ್ಟಂತೆ.

## ಭಗವನ್ನಾಮದ ಪ್ರಭಾವ - ಒಂದು ದೃಷ್ಟಾಂತ

ಬಹಳ ಉಚ್ಚಶ್ರೇಣಿಯ ಒಬ್ಬ ಭಗವದ್ಭಕ್ತ ನಾಮನಿಷ್ಠ ಮಹಾತ್ಮನಿದ್ದನು. ಅವನ ಹತ್ತಿರ ಒಬ್ಬ ಶಿಷ್ಯನೂ ಇದ್ದನು. ಒಮ್ಮೆ ಆ ಮಹಾತ್ಮನು ಎಲ್ಲಿಯೋ ಹೊರಗಡೆ ಹೋಗಿದ್ದನು. ಅದೇ ಸಮಯದಲ್ಲಿ ಆತನ ಕುಟೀರಕ್ಕೆ ಒಬ್ಬ ವ್ಯಕ್ತಿ ಬಂದನು. ಅವನು ಕೇಳಿದನು –'ಮಹಾತ್ಮರೆಲ್ಲಿ?' ಶಿಷ್ಯನು ಹೇಳಿದನು –'ಸ್ವಾಮೀಜಿಯವರು ಯಾವುದೋ ವಿಶೇಷ ಕಾರ್ಯಕ್ಕಾಗಿ ಹೊರಗಡೆ ಎಲ್ಲಿಗೋ ಹೋಗಿದ್ದಾರೆ. ನಿಮ್ಮದು ಏನಾದರೂ ಕೆಲಸವಿದ್ದರೆ ಹೇಳಿ.' ಆಗಂತುಕನು ಹೇಳಿದನು–'ನಮ್ಮ ಹುಡುಗನಿಗೆ ಬಹಳ ಕಾಯಿಲೆ, ಅವನಿಗೆ ಹೇಗೆ ಆರೋಗ್ಯ ಲಾಭ ಉಂಟಾಗುವುದು? ಮಹಾತ್ಮರಿಲ್ಲ, ನೀವೇ ಯಾವುದಾದರೂ ಉಪಾಯವನ್ನು ತೋರಿಸುವ ಕೃಪೆಮಾಡಬೇಕು.'

ಶಿಷ್ಯನು ಹೇಳಿದನು–'ಒಂದು ಬಹಳ ಸುಲಭ ಉಪಾಯವಿದೆ–'ರಾಮ' ನಾಮವನ್ನು ಮೂರು ಬಾರಿ ಬರೆದುಕೊಳ್ಳಿ ಮತ್ತು ಅದನ್ನು ತೊಳೆದು ಕುಡಿಸಿರಿ. ಸಾಕು, ಇದರಿಂದ ಕಾಯಿಲೆ ವಾಸಿಯಾಗುವುದು.'

ಆಗಂತುಕನು ತನ್ನ ಮನೆಗೆ ಹೋದನು. ಮಾರನೇ ದಿವಸ ಆ ವ್ಯಕ್ತಿ ಬಹಳ ಸಂತೋಷದಿಂದ ಮಹಾತ್ಮರ ಕುಟೀರಕ್ಕೆ ಬಂದನು. ಆಗ ಮಹಾತ್ಮರು ಅಲ್ಲಿಯೇ ಇದ್ದರು. ಅವರ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಅವನು ವಿನಮ್ರ ವಚನಗಳಿಂದ ಕೈಮುಗಿಯುತ್ತಾ ಹೇಳಿದನು–'ಸ್ವಾಮೀಜಿ! ತಮ್ಮ ಶಿಷ್ಯರು ಸಿದ್ಧಪುರುಷರು. ನಿನ್ನೆ ದಿವಸ ನಾನು ಇಲ್ಲಿಗೆ ಬಂದಿದ್ದೆನು. ಆಗ ತಾವು ಇರಲಿಲ್ಲ. ಆದ್ದರಿಂದ ಇವರಿಂದ ನಾನು ನನ್ನ ಪ್ರಿಯ ಪುತ್ರನ ರೋಗ ನಿವಾರಣೆಗಾಗಿ ಉಪಾಯವನ್ನು ಕೇಳಿಕೊಂಡೆ. ಆಗ ಇವರು 'ರಾಮ' ಎಂಬ ನಾಮವನ್ನು ಮೂರು ಸಾರಿ ಬರೆದು ಅದನ್ನು ತೊಳೆದು ಕುಡಿಸು ಎಂದು ತಿಳಿಸಿದರು. ನಾನು ಮನೆಗೆ ಹೋಗಿ ಸರಿಯಾಗಿ

ಅದೇ ಪ್ರಕಾರ ಮಾಡಿದೆನು. ಕೂಡಲೇ ಹುಡುಗ ಎದ್ದು ಕುಳಿತನು ಮತ್ತು ಅವನಿಗೆ ಯಾವ ರೋಗವೂ ಇರಲಿಲ್ಲವೆಂಬಂತೆ ಆಯಿತು.'

ಇದನ್ನು ಕೇಳಿ ಮಹಾತ್ಮರು ತಮ್ಮ ಶಿಷ್ಯನ ಮೇಲೆ ಬಹಳ ಕೋಪಗೊಂಡರು ಮತ್ತು ಅವನ ಹಿತಕ್ಕಾಗಿ ಕ್ರೋಧದ ನಟನೆ ಮಾಡುತ್ತಾ ಹೇಳಿದರು–'ಎಲವೋ ಮೂರ್ಖ! ಈ ಸಾಧಾರಣವಾದ ಕಾಯಿಲೆಗಾಗಿ ನೀನು ರಾಮ–ನಾಮವನ್ನು ಮೂರು ಸಲ ಪ್ರಯೋಗ ಮಾಡಿಸಿರುವೆ. ನಿನಗೆ ನಾಮದ ಮಹಿಮೆ ಸ್ವಲ್ಪವೂ ಸಹ ಗೊತ್ತಿಲ್ಲ. ಒಂದೇ ಬಾರಿ ನಾಮದ ಉಚ್ಚಾರಣೆ ಮಾಡುವುದರಿಂದ ಅನಂತ ಕೋಟಿ ಪಾಪಗಳ ಮತ್ತು ಭವರೋಗದ ನಾಶವಾಗಿ ಹೋಗುತ್ತದೆ ಮತ್ತು ಮನುಷ್ಯನು ಅನಾಮಯ ಪರಮಪದವನ್ನೂ ಪಡೆಯುತ್ತಾನೆ. ನೀನು ಈ ಆಶ್ರಮದಲ್ಲಿರಲು ಯೋಗ್ಯನಲ್ಲ. ಆದ್ದರಿಂದ ನಿನಗೆ ಇಷ್ಟಬಂದ ಕಡೆಗೆ ಹೊರಟುಹೋಗು'. ಇದರಿಂದ ಶಿಷ್ಯನ ಕಣ್ಣುಗಳಿಂದ ಕಣ್ಣೀರು ಬಂದವು ಮತ್ತು ಅವನು ತನ್ನ ಗುರುದೇವನಲ್ಲಿ ಬಹಳ ಅನುನಯ–ವಿನಯ ಮಾಡಿಕೊಂಡನು. ಸಂತರು ಮೃದು ಹೃದಯಿಗಳಾಗಿರುತ್ತಾರೆ, ಮೇಲಿನಿಂದಲೂ ಶಾಂತರಾದರು ಮತ್ತು ಅವನನ್ನು ಕ್ಷಮಿಸಿದರು.

ಅನಂತರ ಮಹಾತ್ಮರು ಫಳ ಫಳ ಹೊಳೆಯುವ ಒಂದು ಸುಂದರವಾದ ಮಿರುಗುವ ಕಲ್ಲನ್ನು ಎಲ್ಲಿಂದಲೋ ತಂದು ಅದನ್ನು ಶಿಷ್ಯನಿಗೆ ಕೊಟ್ಟು ಹೇಳಿದರು. 'ನೀನು ಪಟ್ಟಣಕ್ಕೆ ಹೋಗಿ ಇದರ ಬೆಲೆ ಎಷ್ಟೆಂಬುದನ್ನು ತಿಳಿದುಕೊಂಡು ಬಾ. ಎಚ್ಚರಿಕೆ ! ಇದನ್ನು ಯಾವ ಬೆಲೆಗೂ ಮಾರಬಾರದು, ಕೇವಲ ಬೆಲೆ ಕಟ್ಟಿಸುವುದು ಮಾತ್ರ. ಯಾರು ಎಷ್ಟು ಬೆಲೆ ಕಟ್ಟುತ್ತಾರೆ. ಅದನ್ನು ಬರೆದುಕೊಂಡು ಹಿಂದಿರುಗಿ ಬರುವುದು.'

ಶಿಷ್ಯನು ಅದನ್ನು ತೆಗೆದುಕೊಂಡು ಪೇಟೆಗೆ ಹೋದನು. ಮೊಟ್ಟಮೊದಲು ಒಬ್ಬ ತರಕಾರಿ ಮಾರುವವಳು ಸಿಕ್ಕಿದಳು. ಅವನು ಕಲ್ಲನ್ನು ತೆಗೆದು ಅವಳಿಗೆ ತೋರಿಸಿ ಕೇಳಿದನು–'ನೀನು ಇದಕ್ಕೆ ಹೆಚ್ಚೆಂದರೆ ಎಷ್ಟು ಬೆಲೆ ಕೊಡಬಹುದು?' ತರಕಾರಿ ಮಾರುವವಳು ಕಲ್ಲಿನ ಹೊಳಪು ಮತ್ತು ಸೌಂದರ್ಯವನ್ನು ನೋಡಿ ಯೋಚಿಸಿದಳು–'ಇದು ಬಹಳ ಚೆನ್ನಾಗಿರುವ ಕಲ್ಲು, ಮಕ್ಕಳು ಆಟವಾಡುವುದಕ್ಕೆ

ಬಹು ಸುಂದರವಾದ ವಸ್ತು.' ಅವಳು ಹೇಳಿದಳು–'ಇದರ ಬೆಲೆಗೆ ಒಂದೂವರೆ ಕೇಜಿ ಮೂಲಂಗಿ ಅಥವಾ ಆಲೂಗಡ್ಡೆ ಅಥವಾ ನಿನಗೆ ಇಷ್ಟವಾದ ಯಾವುದಾದರೂ ತರಕಾರಿ ಸೊಪ್ಪು ತೆಗೆದುಕೊಳ್ಳಬಹುದು.' 'ಮಾರುವುದಿಲ್ಲ' ಎಂದು ಹೇಳಿ ಶಿಷ್ಯನು ಮುಂದೆ ಹೋದನು, ಒಬ್ಬ ವ್ಯಾಪಾರಿಯೊಡನೆ ಭೇಟಿಯಾಯಿತು. ಅವನನ್ನು ಕೇಳಿದನು–'ಸೇಠ್‌ಜಿಯವರೇ! ಈ ಕಲ್ಲಿಗೆ ನೀವು ಎಷ್ಟು ಬೆಲೆಯನ್ನು ಕೊಡಬಹುದು?' ವ್ಯಾಪಾರಿಯು ಯೋಚಿಸಿದ ಕಲ್ಲೇನೋ ಬಹು ಸುಂದರ ಹಾಗೂ ಪ್ರಕಾಶಮಾನವಾಗಿದೆ ಮತ್ತು ಹೆಚ್ಚು ಭಾರವಾಗಿಯೂ ಇದೆ, ಆದ್ದರಿಂದ ಚಿನ್ನ–ಬೆಳ್ಳಿ ತೂಕಮಾಡಲು ಒಳ್ಳೆಯ ಉಪಯೋಗವಾಗಬಹುದು. ಅವನು ಹೇಳಿದನು–'ಒಂದು ರೂಪಾಯಿ ಕೊಡತ್ತೇನೆ' ಅದನ್ನು ತಿರಸ್ಕರಿಸಿ ಶಿಷ್ಯನು ಮುಂದೆ ನಡೆದಾಗ ಒಬ್ಬ ಅಕ್ಕಸಾಲಿಗನ ಅಂಗಡಿ ಸಿಕ್ಕಿತು. ಅಕ್ಕಸಾಲಿಗನು ನೋಡಿ ಯೋಚಿಸಿದನು–ಇದು ನನ್ನ ಕೆಲಸಕ್ಕೆ ಬೇಕಾದ ಒಳ್ಳೆಯವಸ್ತು. ಇದನ್ನು ಒಡೆದು ಬಹಳಷ್ಟು ರತ್ನಗಳನ್ನು ಮಾಡಬಹುದು. ಆದುದರಿಂದ ಅವನು ಹೇಳಿದನು–'ಹೆಚ್ಚೆಂದರೆ ಒಂದು ಸಾವಿರ ರೂಪಾಯಿಯವರೆಗೆ ನಾನು ಕೊಡಬಲ್ಲೆನು'

'ಮಾರುವುದಿಲ್ಲ' ಎಂದು ಹೇಳಿ ಶಿಷ್ಯನು ಬಹಳ ಉತ್ಸಾಹದಿಂದ ಮುಂದಕ್ಕೆ ಹೋದನು. ಒಬ್ಬ ರತ್ನ ಪರೀಕ್ಷಕನ ಅಂಗಡಿಗೆ ಹೋದನು. ಮೊದಲು ಗುರುಗಳ ಬಳಿಗೇ ಹೊರಟಿದ್ದನು, ಆಗ ಅವನಿಗೆ ಯಾರಾದರೂ ರತ್ನಪರೀಕ್ಷಕರ ಹತ್ತಿರಕ್ಕೆ ಹೋಗುವ ಸಾಹಸವೇ ಆಗುತ್ತಿರಲಿಲ್ಲ; ಆದರೆ ಆ ಕಲ್ಲಿನ ಬೆಲೆಯಲ್ಲಿ ವೃದ್ಧಿಯಾಗುತ್ತಾ ಇದ್ದಂತೆ ಅವನ ಸಾಹಸವೂ ಹೆಚ್ಚುತ್ತಾ ಹೋಯಿತು. ಈಗ ಅವನ ದೃಷ್ಟಿ ಕೂಡಾ ಬದಲಾಯಿತು. ಇದೊಂದು ಸಾಧಾರಣ ಹೊಳೆಯುವ ಕಲ್ಲು ಎಂಬ ಅವನ ಭಾವನೆ ನಶಿಸಿಹೋಯಿತು. ರತ್ನಪರೀಕ್ಷಕನಿಗೆ ತೋರಿಸಿ ಅದರ ಬೆಲೆಯನ್ನು ಕೇಳಿದನು. ಅವನು ಯೋಚಿಸಿದಾಗ ಅದು ವಜ್ರವೆಂದು ಅವನಿಗೆ ತಿಳಿಯಿತು. ಅವನು ಅದರ ಬೆಲೆಯಾಗಿ ಒಂದು ಲಕ್ಷರೂಪಾಯಿ ಕೊಡಲು ಸಿದ್ಧನಾದನು. ಆದರೆ ಮಾರುವುದಾಗಿರಲಿಲ್ಲ. ಆದುದರಿಂದ ಶಿಷ್ಯನು ಅದೇ ಉತ್ತರವನ್ನು ಅವನಿಗೂ ಕೊಟ್ಟು ಉಚ್ಚಶ್ರೇಣಿಯ ರತ್ನ ಪರೀಕ್ಷಕರ ಹತ್ತಿರಕ್ಕೆ ಹೋದನು. ಎಲ್ಲರೂ ಸೇರಿಕೊಂಡು ಅದನ್ನು ಪರೀಕ್ಷಿಸಿದರು ಮತ್ತು ಐದು ಕೋಟಿ ರೂಪಾಯಿಗಳೆಂದು ಅದರ ಬೆಲೆ

ನಿಶ್ಚಯಿಸಿದರು. ಅನಂತರ ಆ ಶಿಷ್ಯನು ರಾಜನ ಬಳಿಗೆ ಹೋದನು. ರಾಜನು ಶಿಷ್ಯನನ್ನು ಗೌರವಿಸಿ ಕುಳ್ಳಿರಿಸಿದನು ಮತ್ತು ಮುಖ್ಯ ಮುಖ್ಯರಾದ ದೊಡ್ಡ ರತ್ನ ಪರೀಕ್ಷಕರನ್ನೆಲ್ಲಾ ಕರೆಯಿಸಿ ಆ ರತ್ನದ ಮೌಲ್ಯವನ್ನು ನಿರ್ಧರಿಸಲು ಹೇಳಿದನು. ಎಲ್ಲರೂ ವಿಚಾರ ವಿಮರ್ಶೆ ಮಾಡಿದ ನಂತರ ಆಶ್ಚರ್ಯ ಪಡುತ್ತಾ ಹೇಳಿದರು–'ಮಹಾಪ್ರಭು! ನಾವು ಯಾವಾಗಲೂ ಇಂತಹ ರತ್ನವನ್ನು ನೋಡಿಯೇ ಇಲ್ಲ. ಆದುದರಿಂದ ಇದರ ಮೌಲ್ಯವನ್ನು ನಿರ್ಧರಿಸುವುದು ನಮ್ಮ ಬುದ್ಧಿಶಕ್ತಿಗೆ ಮೀರಿದ ಮಾತಾಗಿದೆ. ನಮಗಾದರೋ ಹೀಗೆ ತಿಳಿದುಬರುತ್ತಿದೆ ನೀವು ನಿಮ್ಮ ರಾಜ್ಯವನ್ನೆಲ್ಲಾ ಕೊಟ್ಟರೂ ಕೂಡ ಇದರ ಬೆಲೆಗೆ ಸಾಲದು.'

ಮಹಾರಾಜನು ಶಿಷ್ಯನನ್ನು ಕೇಳಿದನು–'ಇಂತಹ ಅನುಪಮ ರತ್ನ ನಿಮಗೆ ಹೇಗೆ ದೊರೆಯಿತು?' ಶಿಷ್ಯನು ಹೇಳಿದನು–'ಇದನ್ನು ನಮ್ಮ ಗುರುಗಳು ನನಗೆ ಕೊಟ್ಟು ಕೇವಲ ಮೌಲ್ಯಮಾಪನಕ್ಕಾಗಿಯೇ ಕಳುಹಿಸಿದ್ದಾರೆ, ಆದರೆ ಮಾರುವಂತೆ ಆಜ್ಞೆಯಾಗಿಲ್ಲ, ರಾಜನು ಬಹಳ ವಿನಮ್ರಭಾವದಿಂದ ಹೇಳಿದನು–'ಇದರ ಬೆಲೆಯು ನನ್ನ ರಾಜ್ಯಕ್ಕಿಂತಲೂ ಅಧಿಕವಾಗಿದೆ. ನಿಮ್ಮ ಗುರುಗಳು ಇದನ್ನು ಮಾರಾಟ ಮಾಡುವುದಾದರೆ ಇದಕ್ಕೆ ಬದಲಾಗಿ ನನ್ನ ರಾಜ್ಯವನ್ನೆಲ್ಲಾ ಸಂತೋಷದಿಂದ ಕೊಡುತ್ತೇನೆ. ನೀವು ಪೂಜ್ಯ ಸ್ವಾಮಿಯವರನ್ನು ಕೇಳಿರಿ.' ಸ್ವಾಮಿಯವರು ಉಚ್ಚಶ್ರೇಣಿಯ ಮಹಾತ್ಮರಾಗಿದ್ದಾರೆ, ಇದನ್ನು ಎಲ್ಲರೂ ಬಲ್ಲರು. ಆದುದರಿಂದ ಎಲ್ಲರೂ ಬಹು ಆದರ–ಸತ್ಕಾರಗಳ ಸಹಿತ ಶಿಷ್ಯನನ್ನು ಅಲ್ಲಿಂದ ಬೀಳ್ಕೊಟ್ಟರು.

ಶಿಷ್ಯನು ಮಹಾತ್ಮರ ಬಳಿಗೆ ಹಿಂದಿರುಗಿ ಬಂದು ನಡೆದ ಕಥೆಯನ್ನೆಲ್ಲಾ ತಿಳಿಸಿದನು ಮತ್ತು ಕೊನೆಗೆ ಹೇಳಿದನು–'ಗುರುಗಳೇ ರಾಜನು ಇದರ ಬೆಲೆಗಾಗಿ ತನ್ನ ರಾಜ್ಯವನ್ನೆಲ್ಲಾ ಕೊಡುವವನಿದ್ದಾನೆ; ಹೀಗಿರುವಾಗ ಇದನ್ನು ಮಾರಿಬಿಡಬೇಕು ಎಂದು ನನಗೆ ಅನಿಸುತ್ತದೆ' ಮಹಾತ್ಮರು ಹೇಳಿದರು–'ಇದರ ಬೆಲೆಗೆ ರಾಜ್ಯವೂ ಯಾವ ವಸ್ತುವೂ ಅಲ್ಲ. ಇದುವರೆಗೂ ಕೂಡ ಇದಕ್ಕೆ ಅನುಗುಣವಾದ ಇದರ ಬೆಲೆಯನ್ನು ನಿರ್ಧರಿಸಲಾಗಿಲ್ಲ.' ಶಿಷ್ಯನು ಆಶ್ಚರ್ಯಪಡುತ್ತಾ ಹೇಳಿದನು–'ರಾಜ್ಯಕ್ಕಿಂತ ಹೆಚ್ಚಿನದು ಮತ್ತೇನು ಬೆಲೆಯಾಗಬಲ್ಲದು?' ಮಹಾತ್ಮರು ಹೇಳಿದರು–'ಇಲ್ಲಿ ಯಾವುದಾದರೂ ಕಬ್ಬಿಣದಿಂದ ಮಾಡಿದ ವಸ್ತು ಸಿಕ್ಕುವುದೇ?'

ಶಿಷ್ಯನು ಉತ್ತರವಿತ್ತನು –'ಸ್ವಾಮಿ ಹೌದು, ಆಶ್ರಮಕ್ಕೆ ಕೆಲವರು ಯಾತ್ರಿಕರು ಬಂದಿರುತ್ತಾರೆ. ಅವರ ಹತ್ತಿರ ತವೆ, ಇಕ್ಕಳ ಮುಂತಾದ ಕಬ್ಬಿಣದ ಬೇಕಾದಷ್ಟು ಪಾತ್ರೆಗಳಿವೆ. ಅಪ್ಪಣೆಯಾದರೆ ಅವುಗಳಲ್ಲಿ ಕೆಲವನ್ನು ತೆಗೆದುಕೊಂಡು ಬರುವೆನು.' ಮಹಾತ್ಮರು ಹೇಳಿದರು–'ಸರಿ, ತೆಗೆದುಕೊಂಡು ಬಾ.'

ಶಿಷ್ಯನು ಕೆಲವು ಕಬ್ಬಿಣದ ವಸ್ತುಗಳನ್ನು ತಂದನು. ಮಹಾತ್ಮರು ಅವುಗಳಿಗೆ ಆ ಕಲ್ಲನ್ನು ಸ್ಪರ್ಶ ಮಾಡುತ್ತಿರುವಂತೆಯೇ ಅವುಗಳೆಲ್ಲಾ ಕಬ್ಬಿಣದ ಪಾತ್ರೆಗಳು ನೋಡು ನೋಡುತ್ತಿದ್ದ ಹಾಗೆಯೇ ಶುದ್ಧ ಬಂಗಾರವಾಗಿಹೋದವು. ಇದನ್ನು ನೋಡಿ ಶಿಷ್ಯನಿಗೆ ಬಹಳ ಆಶ್ಚರ್ಯವಾಯಿತು. ಅವನು ವಿಸ್ಮಿತನಾಗಿ ಕೇಳಿದನು–'ಇದೇನೋ ಬಹು ವಿಲಕ್ಷಣ ಅರ್ಥಾತ ಅದ್ಭುತವಾದ ವಸ್ತು, ಇದೇನು ಗುರುದೇವ?' ಮಹಾತ್ಮರು ಹೇಳಿದರು–'ಇದೇ ಆ ಸ್ಪರ್ಶಮಣಿ ಕಲ್ಲು, ಇದರ ಸ್ಪರ್ಶಮಾತ್ರದಿಂದಲೇ ಕಬ್ಬಿಣವು ಚಿನ್ನವಾಗುವುದು. ಸರಿ, ಈಗ ನೀನೇ ಹೇಳು–ಇದರ ಬೆಲೆ ಎಷ್ಟಾಗಬೇಕು?' ಶಿಷ್ಯ ಹೇಳಿದನು–'ಪ್ರಪಂಚದಲ್ಲಿ ಅತ್ಯಧಿಕ ಬೆಲೆಯುಳ್ಳದ್ದು ಚಿನ್ನವೆಂದು ನಿಶ್ಚಿತವಾಗಿದೆ ಮತ್ತು ಬೆಲೆ ಅದರಿಂದ ಉತ್ಪತ್ತಿಯಾಗುತ್ತದೆ, ಅಂದಮೇಲೆ ಇದರ ಮೌಲ್ಯವನ್ನು ಹೇಗೆ ಊಹಿಸುವುದು.'

ಮಹಾತ್ಮರು–'ಭಗವನ್ನಾಮದ ಮೌಲ್ಯವಾದರೋ ಇದಕ್ಕಿಂತಲೂ ಅಧಿಕವಾಗಿದೆ. ಏಕೆಂದರೆ ಈ ಸ್ಪರ್ಶಮಣಿಯು ಜಡ ಪದಾರ್ಥ. ಇದರಿಂದ ಕೇವಲ ಜಡ ಪದಾರ್ಥಗಳು ಮಾತ್ರ ದೊರೆಯಬಲ್ಲವು, ಸಚ್ಚಿದಾನಂದ ಪರಮಾತ್ಮನಲ್ಲ, ಆದುದರಿಂದ ಯಾವುದೇ ಸಾಂಸಾರಿಕ ಪದಾರ್ಥಗಳೊಡನೆ ಭಗವನ್ನಾಮದ ಹೋಲಿಕೆ ಮಾಡುವುದು ಸರ್ವಥಾ ಅನುಚಿತ. ಇದರ ಹೋಲಿಕೆಮಾಡುವವನು ಸ್ಪರ್ಶಮಣಿಯನ್ನು ಕಿಲೋ ಒಂದೂವರೇ ಕಿಲೋ ಮೂಲಂಗಿ, ಆಲೂಗಡ್ಡೆ ಇತ್ಯಾದಿ ತರಕಾರಿಗೆ ಮಾರುವ ಮೂರ್ಖನಿಗಿಂತ ಕಡಿಮೆ ಮೂರ್ಖನೇನಲ್ಲ, ಯಾವ ರೀತಿ ಸ್ಪರ್ಶಮಣಿಯನ್ನು ಗುರುತಿಸಲಾರದ ವ್ಯಕ್ತಿ ಅದರಿಂದ ತುಚ್ಛವಾದ ಪದಾರ್ಥವನ್ನು ತೆಗೆದುಕೊಂಡು ಯಾವಾಗಲೂ ದರಿದ್ರನಾಗಿಯೇ ಉಳಿಯುತ್ತಾನೆಯೋ ಹಾಗೆಯೇ ರಾಮ–ನಾಮದ ಮಹತ್ವವನ್ನು ತಿಳಿಯದವನು ಪ್ರೇಮ ಮತ್ತು ಭಕ್ತಿಯ ದೃಷ್ಟಿಯಿಂದ ಯಾವಾಗಲೂ ದರಿದ್ರನೇ ಆಗಿರುತ್ತಾನೆ. ನೀನು ಭಗವನ್ನಾಮದ ಪ್ರಭಾವ ಮತ್ತು

ತತ್ತ್ವ ರಹಸ್ಯವನ್ನು ತಿಳಿದುಕೊಂಡಿಲ್ಲ, ಆದುದರಿಂದ ಒಂದು ಸಾಧಾರಣವಾದ ರೋಗಕ್ಕಾಗಿ ನೀನು ರಾಮ-ನಾಮವನ್ನು ಮೂರು ಸಲ ಪ್ರಯೋಗ ಮಾಡಿಸಿದೆ, ಯಾವ ನಾಮದ ಪ್ರಭಾವದಿಂದ ಭಯಂಕರ ಭವರೋಗ ನಾಶವಾಗುವುದೋ, ಅದನ್ನೂ ಸಾಮಾನ್ಯ ರೋಗನಾಶಕ್ಕಾಗಿ ಉಪಯೋಗಮಾಡಿಕೊಳ್ಳುವುದು ಸರ್ವಥಾ ಅಜ್ಞಾನ. ನಿನ್ನ ಈ ಅಜ್ಞಾನವನ್ನು ಹೋಗಲಾಡಿಸುವುದಕ್ಕಾಗಿಯೇ ನಿನಗೆ ಸ್ಪರ್ಶಮಣಿ ಯನ್ನು ಕೊಟ್ಟು ಕಳುಹಿಸಿದ್ದೆ. ಇದನ್ನು ಕೇಳಿ ಶಿಷ್ಯನು ಭಗವನ್ನಾಮದ ಪ್ರಭಾವನ್ನು ತಿಳಿದುಕೊಂಡನು ಮತ್ತು ತನ್ನ ತಪ್ಪಿಗಾಗಿ ಪದೇ ಪದೇ ಕ್ಷಮೆ ಯಾಚಿಸಿದನು.

ಈ ಕಥೆಯಿಂದ ನಮಗೆ ಈ ಒಂದು ಪಾಠ ದೊರೆಯುತ್ತದೆ. ಅಜ್ಞಾನೀ ವ್ಯಕ್ತಿಗೆ ಸ್ಪರ್ಶಮಣಿ ಸಿಕ್ಕಿದರೆ ಅವನು ಅದನ್ನು ಅಜ್ಞಾನದಿಂದ ನಾಲ್ಕಾರು ರೂಪಾಯಿಗಳಿಗೆ ಮಾರುತ್ತಾನೆ. ಆ ಮಹಾತ್ಮರು ಶಿಷ್ಯನಿಗೆ ಸರಿಯಾದ ಬೆಲೆಗೆ ಅದನ್ನು ಮಾರುವಂತೆ ಹೇಳಿಬಿಟ್ಟಿದ್ದರೆ, ಅವನು ಹೆಚ್ಚು ಹೆಚ್ಚೆಂದರೆ ಐದಾರು ಕಿಲೋ ಆಲೂಗಡ್ಡೆ ಅಥವಾ ಮೂರ್‍ನಾಲ್ಕು ರೂಪಾಯಿಗಳಿಗೆ ಖಂಡಿತ ಮಾರಿಬರುತ್ತಿದ್ದನು, ಇದನ್ನೇ ಅವನು ಹೆಚ್ಚು ಬೆಲೆಯೆಂದು ತಿಳಿದುಕೊಳ್ಳುತ್ತಿದ್ದನು. ಇದೇ ಪ್ರಕಾರ ಭಗವನ್ನಾಮದ ಪ್ರಭಾವವನ್ನು ತಿಳಿಯದ ಮನುಷ್ಯನು ಅದನ್ನು, ಹೆಂಡತಿ, ಮಕ್ಕಳು, ಐಶ್ವರ್ಯ ಮುಂತಾದವುಗಳಿಗೆ ಬದಲಾಗಿ ಮಾರಿಬಿಡುತ್ತಾನೆ.

# ಭಗವನ್ನಾಮದ ರಹಸ್ಯ

ಭಗವಂತನ ನಾಮದಲ್ಲಿ ಪಾಪಗಳನ್ನು ನಾಶಮಾಡುವ ಬಹಳ ದೊಡ್ಡ ಶಕ್ತಿಯಿದೆ ಎಂಬುದರಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲ. **'ನಾಮ ಅಖಿಲ ಅಘಪುಂಜ ನಸಾವನ'**- ಎಂಬ ಈ ಉಕ್ತಿ ಸರ್ವಥಾ ಸತ್ಯವಾಗಿದೆ. ಆದರೆ ಜನರು ಇದರ ರಹಸ್ಯವನ್ನು ತಿಳಿದುಕೊಳ್ಳದೇ ಇರುವುದರಿಂದ ಇದರ ದುರುಪಯೋಗ ಮಾಡಿಕೊಂಡು ಬಿಡುತ್ತಾರೆ. ನಾಮದಲ್ಲಿ ಪಾಪ ನಾಶದ ಮಹಾನ್ ಶಕ್ತಿ ಇರುತ್ತದೆ ಎಂದು ಅವರು ಯೋಚಿಸುತ್ತಾರೆ. ಈಗ ಪಾಪ ಮಾಡಿಬಿಡೋಣ, ಆಮೇಲೆ ನಾಮ ಜಪದಿಂದ ಅದನ್ನು ಕಳೆದುಕೊಳ್ಳೋಣವೆಂದೂ ಅವರು ಯೋಚಿಸುತ್ತಾರೆ. ಹೀಗೆ ಯೋಚಿಸಿ ಅವರು ಹೆಚ್ಚೆಚ್ಚು ಪಾಪದ ಕೆಸರಿನಲ್ಲಿ ಸಿಕ್ಕಿ ಬೀಳುತ್ತಲೇ ಇರುತ್ತಾರೆ. ನಿಜವಾಗಿಯೂ ಅವರ ಈ ಅನಿಸಿಕೆ ಸರಿಯಾಗಿದ್ದರೆ, ಆಗ ನಾಮ ಜಪವು

ಪಾಪಗಳ ನಾಶಕಾರಿಯಲ್ಲ, ಪ್ರತಿಯಾಗಿ ವೃದ್ಧಿಗೊಳಿಸುವುದೆಂದೇ ಸ್ಥಿರವಾಯಿತು ಎಂದು ಅವರು ಯೋಚಿಸುವುದೇ ಇಲ್ಲ. ಏಕೆಂದರೆ, ಆಗ ಜನರು ನಾಮದ ಆಶ್ರಯದಿಂದ ಮನಸ್ವೀ ಪಾಪಮಾಡುವರು ಮತ್ತು ಇದರಿಂದ ತತ್ಕಾಲಕ್ಕಿಂತಲೂ ಭವಿಷ್ಯದಲ್ಲಿ ಪಾಪಗಳ ಸಂಖ್ಯೆ ಬಹಳವಾಗಿ ವೃದ್ಧಿಯಾಗುತ್ತಾ ಹೋಗುವುದು. ಪೋಲೀಸರ ಉಡುಪು ಧರಿಸಿಕೊಂಡು ಕಳ್ಳತನ ಮಾಡುವವನು ಇತರೇ ಕಳ್ಳನಿಗಿಂತ ಹೆಚ್ಚು ಶಿಕ್ಷಾರ್ಹನಾಗುತ್ತಾನೆ, ಅದೇ ಪ್ರಕಾರ ಭಗವನ್ನಾಮದ ಮುಸುಕು ಧರಿಸಿ ಪಾಪಮಾಡುವ ವ್ಯಕ್ತಿ ಅಧಿಕ ದಂಡನೆಗೆ ಪಾತ್ರನಾಗುತ್ತಾನೆ. ಏಕೆಂದರೆ ಅವನ ಪಾಪ ವಜ್ರಲೇಪಿತವಾಗಿರುತ್ತದೆ. ಅನುಭವಿಸದೇ ಅದರ ನಾಶವಾಗುವುದಿಲ್ಲ. ನಾಮದ ಆಶ್ರಯಿಂದ ಪಾಪ ಮಾಡುವುದಾದರೇ ನಾಮದ ಹತ್ತು ಅಪರಾಧಗಳಲ್ಲಿ ಒಂದು ನಾಮಾಪರಾಧವಾಗಿದೆ. ನಾಮದ ಹತ್ತು ಅಪರಾಧಗಳು ಇವು–

**ಸನ್ನಿಂದಾಸತಿ ನಾಮವೈಭವಕಥಾ ಶ್ರೀಶೇಶಯೋರ್ಭೇದಧೀ–**
**ರಶ್ರದ್ಧಾ ಶ್ರುತಿಶಾಸ್ತ್ರದೈಶಿಕಗಿರಾಂ ನಾಮ್ನ್ಯರ್ಥವಾದಭ್ರಮಃ ।**
**ನಾಮಾಸ್ತೀತಿ ನಿಷಿದ್ಧವೃತ್ತಿವಿಹಿತತ್ಯಾಗೌ ಹಿ ಧರ್ಮಾಂತರೈಃ**
**ಸಾಮ್ಯಂ ನಾಮಜಪೇ ಶಿವಸ್ಯ ಚ ಹರೇರ್ನಾಮಾಪರಾಧಾ ದಶ ॥**

೧. ಸತ್ಪುರುಷರ–ಈಶ್ವರನ ಭಜನೆ–ಧ್ಯಾನ ಮಾಡುವವರ ನಿಂದನೆ, ೨. ಶ್ರದ್ಧೆಯಿಲ್ಲದವರಿಗೆ ನಾಮದ ಮಹಿಮೆಯನ್ನು ಹೇಳುವುದು, ೩. ವಿಷ್ಣು ಮತ್ತು ಶಿವರ ನಾಮರೂಪದಲ್ಲಿ ಭೇದ ಬುದ್ಧಿ, ೪–೫–೬. ವೇದ ಶಾಸ್ತ್ರ ಮತ್ತು ಗುರುಗಳಿಂದ ಹೇಳಲ್ಪಟ್ಟ ನಾಮ ಮಹಾತ್ಮೆಯಲ್ಲಿ ಅಪನಂಬಿಕೆ, ೭. ಹರಿನಾಮದಲ್ಲಿ ಅರ್ಥವಾದದ ಭ್ರಮೆ ಅರ್ಥಾತ್ ನಾಮ ಮಹಿಮೆ ಕೇವಲ ಸ್ತುತಿ ಮಾತ್ರ ಎಂಬ ಭಾವನೆ, ೮–೯ ನಾಮದ ಬಲದ ಮೇಲೆ ವಿಹಿತವಾದುದನ್ನು ತ್ಯಜಿಸುವುದು ಮತ್ತು ನಿಷಿದ್ಧವಾದುದನ್ನು ಆಚರಿಸುವುದು, ೧೦. ಅನ್ಯ ಧರ್ಮಗಳೊಡನೆ ನಾಮದ ಹೋಲಿಕೆ ಅಂದರೆ ಶಾಸ್ತ್ರವಿಹಿತ ಕರ್ಮಗಳೊಡನೆ ನಾಮದ ಹೋಲಿಕೆ–ಇವುಗಳೆಲ್ಲಾ ಪರಮಾತ್ಮ ಶಿವ ಮತ್ತು ವಿಷ್ಣುವಿನ ನಾಮ ಜಪದಲ್ಲಿ ನಾಮದ ಹತ್ತು ಅಪರಾಧಗಳಾಗಿವೆ.

ಈ ಹತ್ತು ಅಪರಾಧಗಳಿಂದ ತಮ್ಮನ್ನು ಪಾರುಮಾಡಿಕೊಂಡು ನಾಮದ ಜಪ ಮಾಡುವವರು ನಾಮದ ರಹಸ್ಯವನ್ನು ಅರಿತವರು.

ವಾಣಿಯಿಂದ ನಾಮ ಜಪಿಸುವುದಕ್ಕಿಂತ ಮನಸ್ಸಿನಲ್ಲಿಯೇ ಜಪಿಸುವುದು ನೂರುಪಟ್ಟು ಹೆಚ್ಚು ಲಾಭದಾಯಕ ಮತ್ತು ಮಾನಸಿಕ ಜಪವನ್ನೂ ಶ್ರದ್ಧಾ-ಪ್ರೇಮಗಳಿಂದ ಮಾಡಿದರೆ ಅದಕ್ಕೆ ಅನಂತ ಫಲವುಂಟು; ಜೊತೆಗೆ ಅದನ್ನೇ ಗುಪ್ತ ಮತ್ತು ನಿಷ್ಕಾಮ ಭಾವದಿಂದ ಮಾಡಿದರೆ ಶೀಘ್ರವಾಗಿ ಪರಮಾತ್ಮನ ಸಾಕ್ಷಾತ್ಕಾರ ಆಗುವುದು ಆದುದರಿಂದ ಈ ರಹಸ್ಯವನ್ನು ಚೆನ್ನಾಗಿ ತಿಳಿದುಕೊಂಡು ಭಗವನ್ನಾಮದ ಆಶ್ರಯ ಪಡೆದುಕೊಳ್ಳಬೇಕು.

## ಭಗವನ್ನಾಮದ ತತ್ತ್ವ

ನಿಜವಾಗಿಯೂ, ನಾಮ ಮತ್ತು ದೇವರಲ್ಲಿ ಯಾವ ಭೇದವೂ ಇಲ್ಲ. ಅವು ಭಿನ್ನವಾಗಿದ್ದರೂ ಸಂಪೂರ್ಣವಾಗಿ ಅಭಿನ್ನವಾದವು. ಗೀತೆಯಲ್ಲಿ ಭಗವಂತ ಹೇಳುತ್ತಾನೆ-**‘ಯಜ್ಞಾನಾಂ ಜಪಯಜ್ಞೋಽಸ್ಮಿ’** (೧೦/೨೫)

‘ಎಲ್ಲಾ ಯಜ್ಞಗಳಲ್ಲಿ ಜಪಯಜ್ಞ ನಾನೇ ಆಗಿದ್ದೇನೆ’ -ಅರ್ಥಾತ್ ಅನ್ಯ ಸಮಸ್ತ ಯಜ್ಞಗಳಾದರೋ ನನ್ನ ಪ್ರಾಪ್ತಿಗೆ ಸಾಧನಗಳೇ; ಆದರೆ ಜಪ-ಯಜ್ಞ (ನಾಮಜಪ) ವಾದರೋ ಸ್ವಯಂ ನಾನೇ ಆಗಿದ್ದೇನೆ. ಯಾರು ಈ ತತ್ತ್ವವನ್ನು ಹೃದಯಂಗಮ ಮಾಡಿಕೊಳ್ಳುತ್ತಾರೆಯೋ, ಸರಿಯಾಗಿ ತಿಳಿದುಕೊಳ್ಳುತ್ತಾರೆಯೋ, ಅವರು ನಾಮವನ್ನೂ ಎಂದಿಗೂ ಮರೆಯಲಾರರು.

## ಭಗವನ್ನಾಮದ ಗುಣ

ನಿತ್ಯ ನಿರಂತರ ಭಗವಂತನ ನಾಮದ ಜಪ ಮಾಡುತ್ತಾ ಇರುವವನು ಸದ್ಗುಣಗಳ ಸಾಗರನಾಗುತ್ತಾನೆ. ಸಾಗರದಲ್ಲಿ ಅನಂತ ಜಲರಾಶಿಯಿರುವಂತೆ, ಅವನಲ್ಲಿ ಅನಂತ ಸದ್ಗುಣಗಳು ಬಂದುಬಿಡುತ್ತವೆ. ಇದರಿಂದ ನಾಮವು ಬೀಜದಂತೆ ಎಂಬುದು ಸ್ಪಷ್ಟವಾಗುತ್ತದೆ. ಬೀಜವನ್ನು ಬಿತ್ತಿದರೆ ಅದರಿಂದ ಮೊಳಕೆ ಬಂದು ಚಿಗುರು ಉತ್ಪತ್ತಿಯಾಗುತ್ತದೆ ಮತ್ತು ಅದೇ ಬೆಳೆದು ಹುಲುಸಾಗಿ ವಿಶಾಲವೃಕ್ಷವಾಗುತ್ತದೆ. ಅದರಂತೆಯೇ ನಾಮವನ್ನು ಜಪಿಸುವವರಲ್ಲಿ ಅನಾಯಾಸವಾಗಿಯೇ ಎಲ್ಲಾ ಸದ್ಗುಣಗಳ ಪ್ರಾದುರ್ಭಾವವಾಗುತ್ತದೆ.

ಅದಕ್ಕೋಸ್ಕರ ಮನುಷ್ಯನು ಭಗವನ್ನಾಮದ ಗುಣ, ಪ್ರಭಾವ, ತತ್ತ್ವ

ಮತ್ತು ರಹಸ್ಯವನ್ನು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಳ್ಳುವುದರಿಂದಲೇ ಅವನಿಗೆ ನಾಮದಲ್ಲಿ ಪರಮ ಶ್ರದ್ಧೆಯುಂಟಾಗುತ್ತದೆ ಮತ್ತು ಶ್ರದ್ಧಾಯುಕ್ತರಾಗಿ ಮಾಡುವ ಜಪವು ತತ್ಕಾಲವೇ ಪೂರ್ಣ ಫಲಕೊಡುತ್ತದೆ. ಆದುದರಿಂದ ಭಗವಂತನ ನಾಮದಲ್ಲಿ ಅತಿಶಯ ಶ್ರದ್ಧೆಯುಂಟಾಗಲು ನಾವು ಸತ್ಪುರುಷರ ಸಂಗ ಮಾಡಬೇಕು. ಸತ್ಪುರುಷರ ಸಂಗ ದೊರೆಯದಿದ್ದರೆ ನಾವು ಸತ್ ಶಾಸ್ತ್ರಗಳ ಅರ್ಥಾತ್ ಭಗವಂತನ ಮತ್ತು ಆತನ ನಾಮದ ತತ್ತ್ವ, ರಹಸ್ಯ, ಗುಣ, ಪ್ರಭಾವ, ಶ್ರದ್ಧೆ, ಮತ್ತು ಪ್ರೇಮದ ವಿಚಾರಗಳನ್ನು ತಿಳಿಸುವ ಧರ್ಮಗ್ರಂಥಗಳ ಅವಲೋಕನ ಮಾಡಬೇಕು. ಈ ಪ್ರಕಾರ ಮಾಡುವುದ ರಿಂದ ಭಗವನ್ನಾಮದಲ್ಲಿ ಶ್ರದ್ಧಾ-ಪ್ರೇಮ ಉಂಟಾಗುತ್ತದೆ ಮತ್ತು ಶಾಸ್ತ್ರಗಳಲ್ಲಿ ವರ್ಣಿಸಿರುವಂತೆ, ಮಾಡಿದ ಜಪದ ಫಲವೂ ಸಹ ತತ್ಕಾಲದಲ್ಲಿಯೇ ಪ್ರತ್ಯಕ್ಷವಾಗಿ ನೋಡಲು ಬರುತ್ತದೆ.

❑❑❑

# ೫. ಭಗವಂತನ ದರ್ಶನಕ್ಕೆ ಭಾವವೇ ಪ್ರಧಾನ ಸಾಧನ

ಪ್ರಪಂಚದಲ್ಲಿ ಕ್ರಿಯೆಗಿಂತಲೂ ಭಾವನೆಗೇ ಪ್ರಧಾನತೆಯಿದೆ. ಅತ್ಯಂತ ಚಿಕ್ಕ ಕ್ರಿಯೆಯೂ ಕೂಡ ಭಾವದ ಪ್ರಧಾನತೆಯಿಂದ ಮುಕ್ತಿಯನ್ನು ಕೊಡಬಲ್ಲದು, ಅತ್ಯುತ್ತಮ ಕ್ರಿಯೆಯಲ್ಲಿ ಕೀಳು ಭಾವನೆಯದಾದರೆ ನರಕಕ್ಕೆ ಕೊಂಡೊಯ್ಯುವುದು. ಹೇಗೆಂದರೆ, ಯಾವ ಮನುಷ್ಯನಾದರೂ ಜಪ, ತಪ, ಧ್ಯಾನ, ಸ್ತುತಿ, ಪ್ರಾರ್ಥನೆ, ಪೂಜೆ ಪಾಠ, ಯಜ್ಞ ಮತ್ತು ಅನುಷ್ಠಾನಾದಿಗಳನ್ನು ಇತರರ ಅನಿಷ್ಟ ಅಥವಾ ವಿನಾಶಕ್ಕಾಗಿ ಮಾಡಿದರೆ ಅದರ ಫಲಸ್ವರೂಪವಾಗಿ ಕರ್ತೃವಿಗೆ ನರಕ ಪ್ರಾಪ್ತಿಯಾಗುತ್ತದೆ. ಮೇಲೆ ತಿಳಿಸಿದ ಅನುಷ್ಠಾನಾದಿ ಕ್ರಿಯೆಗಳು ಬಹಳ ಉತ್ತಮವಾಗಿದ್ದರೂ ಭಾವವು ತಾಮಸಿಯಾದ ಕಾರಣ ಕರ್ತೃವನ್ನು ಅಧೋಗತಿಗೆ ತಳ್ಳುವುದು. ಭಗವಂತ ಹೇಳುತ್ತಾನೆ–

**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ।**

(ಗೀತಾ ೧೪/೧೮)

'ತಮೋಗುಣಗಳ ಕಾರ್ಯರೂಪೀ ನಿದ್ರೆ, ಪ್ರಮಾದ ಮತ್ತು ಆಲಸ್ಯಾದಿಗಳಲ್ಲಿ ತೊಡಗಿರುವ ಪುರುಷರು ಅಧೋಗತಿಯನ್ನು ಅರ್ಥಾತ್ ಕೀಟ, ಪಶು ಇತ್ಯಾದಿ ನೀಚ ಯೋನಿಗಳನ್ನು ಹಾಗೂ ನರಕವನ್ನು ಪಡೆಯುತ್ತಾರೆ.'

ಇದೇ ಉತ್ತಮ ಕ್ರಿಯೆಯು ಹೆಂಡತಿ, ಮಕ್ಕಳು, ಐಶ್ವರ್ಯ ಇತ್ಯಾದಿಗಳ ಪ್ರಾಪ್ತಿಗಾಗಿ ಅಥವಾ ರೋಗ ನಿವಾರಣೆಗಾಗಿ ಮಾಡಲ್ಪಟ್ಟಾಗ ರಾಜಸೀಭಾವವಾದ ಕಾರಣ ಅದರಿಂದ ಮಧ್ಯಮ ಗತಿ ದೊರಕುತ್ತದೆ. ಅಂದರೆ ಸಾರಾಂಶವಿಷ್ಟೇ ಯಾವ ಯಾವ ಭಾವನೆಯಿಂದ ಕ್ರಿಯೆ ಮಾಡಲಾಗುವುದೋ ಅದೇ ಪ್ರಾಪ್ತಿಯಾಗುತ್ತದೆ. ಮೇಲೆ ತಿಳಿಸಿದ ಉತ್ತಮ ಕ್ರಿಯೆಯೇ ಕರ್ತವ್ಯವೆಂದು ತಿಳಿದುಕೊಂಡು ನಿಷ್ಕಾಮ ಪ್ರೇಮಭಾವದಿಂದ ಭಗವದರ್ಥವಾಗಿ ಮಾಡಲ್ಪಟ್ಟಾಗ ಅದರ ಫಲವಾಗಿ ಅಂತಃಕರಣದ ಶುದ್ಧಿಯಾಗಿ ಭಗವಂತನ ಸಾಕ್ಷಾತ್ಕಾರವುಂಟಾಗುತ್ತದೆ. ಈ ಪ್ರಕಾರ ಒಂದೇ ಕ್ರಿಯೆಯು ಭಾವದ ಕಾರಣದಿಂದ ಉತ್ತಮ, ಮಧ್ಯಮ ಮತ್ತು ಅಧಮ ಫಲಕೊಡುತ್ತದೆ. ಒಂದು ಕೀಳುಮಟ್ಟದ ಕ್ರಿಯೆಯಾದರೂ ಅದರ ಭಾವ ಉಚ್ಚಶ್ರೇಣಿಯದಾದರೆ ಅದೂ ಕೂಡ ಮುಕ್ತಿಯನ್ನು ಕೊಡುವುದು. ತಾಯಿ ತಂದೆ, ಗುರುಗಳ ರೂಪದಲ್ಲಿ ಮಕ್ಕಳ ವಿದ್ಯಾಭ್ಯಾಸ ಮತ್ತು ಪಾಲನೆ ಮಾಡುವುದು, ಅವರ ಮಲ ಮೂತ್ರಗಳನ್ನು ಸ್ವಚ್ಛಮಾಡುವುದು, ವೈದ್ಯನ ರೂಪದಲ್ಲಿ ಶಸ್ತ್ರಚಿಕಿತ್ಸೆ ಮಾಡುವುದು, ರಸ್ತೆ ಮುಂತಾದುವನ್ನು ಶುಭ್ರಗೊಳಿಸುವುದು, ಉರಿಸುವುದಕ್ಕಾಗಿ ಸೌದೆ ಹೊತ್ತು ತರುವುದು, ವಸ್ತುಗಳ ನ್ಯಾಯಯುಕ್ತ ಕ್ರಯ-ವಿಕ್ರಯ ಮಾಡುವುದು, ಸೇವಕ ಮತ್ತು ಸೇವೆಯ ಕೆಲಸಮಾಡುವುದು – ದುರ್ವಾಸನೆಯನ್ನು ಹೋಗಲಾಡಿಸಲು ಕಕ್ಕಸು ಮೂತ್ರಗಳನ್ನು ಶುಚಿ ಮಾಡುವುದು-ಇತ್ಯಾದಿ ಯಾವುದೇ ಕೆಳ ದರ್ಜೆಯ ಕ್ರಿಯೆಗಳಿವೆಯೋ, ಇವುಗಳೆಲ್ಲವನ್ನು ಕರ್ತವ್ಯವೆಂದು ತಿಳಿದುಕೊಂಡು ನಿಷ್ಕಾಮ ಪ್ರೇಮ ಭಾವದಿಂದ ಮಾಡಿದ್ದರೆ, ಇವುಗಳ ಫಲಸ್ವರೂಪವಾಗಿ ಅಂತಃಕರಣದ ಶುದ್ಧಿಯಾಗಿ ಪರಮಾತ್ಮನ ಸಾಕ್ಷಾತ್ಕಾರವೂ ಆಗಬಹುದು. ಇವೇ ಕ್ರಿಯೆಗಳು ಸಕಾಮಭಾವದಿಂದ ಮಾಡಿದರೆ ಇವುಗಳಿಂದ ಆರ್ಥಿಕವಾಗಿ ಸಿದ್ಧಿಯಾಗುತ್ತದೆ.

ಬೇಡರ ಶಬರಿ ಮಾರ್ಗವನ್ನು ಗುಡಿಸುತ್ತಿದ್ದಳು ಮತ್ತು ಕಸ-ಕಡ್ಡಿಗಳನ್ನು, ಮುಳ್ಳು-ಕಲ್ಲುಗ್ಗಳನ್ನು ತೆಗೆದು ಸ್ವಚ್ಛ ಮಾಡುತ್ತಿದ್ದಳು. ಕಾಡಿನಿಂದ ಸೌದೆ ಕಡ್ಡಿಗಳನ್ನು ಜೋಡಿಸಿ ತಂದು ಋಷಿ ಮುನಿಗಳ ಆಶ್ರಮದ ಹತ್ತಿರ ಇಟ್ಟು ಬಿಡುತ್ತಿದ್ದಳು. ಇದು ನೋಡಲು ಕಳಪೆ ಕೆಲಸವೆಂದು ಕಂಡುಬರುತ್ತದೆ. ಆದರೆ ಅವಳು ಅದನ್ನು ನಿಷ್ಕಾಮಭಾವದಿಂದ ಕರ್ತವ್ಯವೆಂದು ತಿಳಿದುಕೊಂಡು ಮಾಡುತ್ತಿದ್ದಳು. ಅದರ ಭಾವ ಉತ್ತಮವಾದುದರಿಂದ ಅವಳ ಅಂತಃಕರಣ ಶುದ್ಧವಾಗಿ ಅವಳಿಗೆ ಭಗವತ್ಪ್ರಾಪ್ತಿ ಆಗಿಹೋಯಿತು.

ಪದ್ಮಪುರಾಣದಲ್ಲಿ ಕಥೆಯೊಂದು ಬರುತ್ತದೆ ನರೋತ್ತಮ ಬ್ರಾಹ್ಮಣನು ತುಲಾಧಾರನೆಂಬ ವೈಶ್ಯನ ಹತ್ತಿರ ಹೋದನು, ಆಗ ತುಲಾಧಾರನು ಗ್ರಾಹಕರಿಗೆ ವಸ್ತುಗ್ಗಳನ್ನು ಮಾರುವುದರಲ್ಲಿ ನಿರತನಾಗಿದ್ದನು. ಆದ್ದರಿಂದ ಅವನು ಹೇಳಿದನು-'ನನಗೆ ಈಗ ಅವಕಾಶವಿಲ್ಲ, ಗ್ರಾಹಕರ ಈ ಗುಂಪು ರಾತ್ರಿಯವರೆಗೂ ಇರುವುದು, ಅನಂತರವೇ ನನಗೆ ಅವಕಾಶ ದೊರೆಯುವುದು. ನೀವು ಅಷ್ಟು ಹೊತ್ತಿನವರೆಗೆ ಇರುವುದಕ್ಕೆ ಆಗದಿದ್ದರೆ ನೀವು ಸಜ್ಜನ ಅದ್ರೋಹಕನ ಹತ್ತಿರಹೋಗಿ. ನಿಮ್ಮಿಂದ ಯಾರ ಬಕಪಕ್ಷಿ ಸತ್ತುಹೋಯಿತು ಮತ್ತು ನಿಮ್ಮ ಪಂಚೆ ಆಕಾಶದಲ್ಲಿ ಒಣಗುವುದು ನಿಂತದ್ದು, ಈ ಎಲ್ಲಾ ರಹಸ್ಯವೂ ನಿಮಗೆ ಮತ್ತೆ ಗೊತ್ತಾಗುವುದು, ಬ್ರಾಹ್ಮಣನ ರೂಪದಲ್ಲಿ ನರೋತ್ತಮನ ಜೊತೆಯಲ್ಲಿಯೇ ಹೋಗುತ್ತಿದ್ದ ಭಗವಂತನು ಹೇಳಿದನು-'ನಡೆ, ನಾವು ಸಜ್ಜನ ಅದ್ರೋಹಕನ ಹತ್ತಿರಕ್ಕೆ ಹೋಗೋಣ' ಹೀಗೆಂದು ಹೇಳಿ ಅವರು ಅಲ್ಲಿಂದ ಸಜ್ಜನ ಅದ್ರೋಹಕನ ಬಳಿಗೆ ಹೊರಟರು, ಆಗ ದಾರಿಯಲ್ಲಿ ನರೋತ್ತಮನು ಆತನನ್ನು ಕೇಳಿದನು-'ತುಲಾಧಾರನು ನನ್ನಿಂದ ಬಕಪಕ್ಷಿ ಭಸ್ಮವಾದ ವಿಷಯ ಹೇಗೆ ತಿಳಿದುಕೊಂಡನು. ಭಗವಂತ ಹೇಳಿದನು-'ಕ್ರಯ-ವಿಕ್ರಯಗಳಲ್ಲಿ ಎಲ್ಲರೊಡನೆಯೂ ಸತ್ಯ ಹಾಗೂ ಸಮಾನವಾದ ವ್ಯವಾಹರ ಮಾಡುತ್ತಾನೆ, ಆದ್ದರಿಂದ ಇವನಿಗೆ ಮೂರು ಕಾಲಗಳ ಜ್ಞಾನವಿದೆ. ಇದೇ ಕಾರಣದಿಂದ ಆ ತುಲಾಧಾರನ ಮನೆಯಲ್ಲಿ ಭಗವಂತನು ಬ್ರಾಹ್ಮಣನ ರೂಪದಲ್ಲಿ ವಾಸಿಸುತ್ತಿದ್ದನು ಮತ್ತು ಅಂತ್ಯದಲ್ಲಿ ಆ ತುಲಾಧಾರ ವೈಶ್ಯನು ವಿಮಾನದಲ್ಲಿ ಕುಳಿತುಕೊಂಡು ಭಗವಂತನ ಸಂಗಡ ಪರಮಧಾಮಕ್ಕೆ ಹೊರಟುಹೋದನು.

ಇಲ್ಲಿ ವಿಚಾರಮಾಡಬೇಕಾದದ್ದು ಇಷ್ಟೇ–ತುಲಾಧಾರ ವೈಶ್ಯನ ಕ್ರಯವಿಕ್ರಯ ರೂಪೀ ಕ್ರಿಯೆಯು ನೋಡಲು ಕಡಿಮೆ ದರ್ಜೆಯದಾದರೂ ಸ್ವಾರ್ಥತ್ಯಾಗ, ಸತ್ಯಸಂಧತೆ, ಪ್ರಾಮಾಣಿಕತೆ ಮತ್ತು ಸಮಾನತೆಯ ವ್ಯವಹಾರಗಳ ಕಾರಣದಿಂದ ಅದೇ ಕ್ರಿಯೆಯು ಎಷ್ಟು ಶ್ರೇಷ್ಠವಾಯಿತೆಂದರೆ ಅದು ಪರಮ ಪದವನ್ನು ದೊರಕಿಸಿ ಕೊಡುವುದೆಂದು ಸ್ಪಷ್ಟವಾಗಿದೆ.

ಇದರಿಂದ ಭಾವವೇ ಪ್ರಧಾನವಾಗಿದೆ, ಕ್ರಿಯೆ ಅಲ್ಲ ಎಂಬ ಮಾತು ಪ್ರಮಾಣಿತ ವಾಯಿತು. ಆದುದರಿಂದ, ನಾವು ಯಾವಾಗಲೂ ಯಾವುದಾದರೂ ಕ್ರಿಯೆ ಮಾಡಲಿ ಅದನ್ನು ಅತ್ಯುತ್ತಮ ಭಾವದಿಂದ ಮಾಡಬೇಕಾದುದೇ ಉಚಿತ.

ಅತ್ಯಂತ ಕೀಳು ದರ್ಜೆಯ ಕ್ರಿಯೆಯೂ ಅತ್ಯುತ್ತಮ ಗತಿಯನ್ನು ದೊರಕಿಸಿ ಕೊಡುವಾಗ, ಕ್ರಿಯೆಯೂ ಅತ್ಯುತ್ತಮ ಮತ್ತು ಭಾವವೂ ಅತ್ಯುತ್ತಮವಾದಾಗ ಹೇಳುವುದೇನು. ಇದೇ ಭಾವವನ್ನು ತಿಳಿದುಕೊಳ್ಳುವುದಕ್ಕಾಗಿ ಕೆಳಗಿನ ಒಂದು ಕಥೆಯಿದೆ.

ಭಗವಂತನ ಒಬ್ಬ ಭಕ್ತನಾದ ಸಾಧಕನಿದ್ದನು. ಅವನು ಒಂದು ಅರಳೀಮರದ ಕೆಳಗೆ ಇದ್ದುಕೊಂಡು ಭಜನೆ ಧ್ಯಾನ, ಗೀತಾ ಪಾಠ, ಸಾಧು–ಸೇವೆ, ತಪಸ್ಸು ಮತ್ತು ಉಪವಾಸಾದಿ ಕ್ರಿಯೆಗಳನ್ನು ಮಾಡುತ್ತಿದ್ದನು. ಒಂದು ಸಾರಿ ಅಲ್ಲಿಗೆ ದೇವರ್ಷಿ ನಾರದರು ದಯಮಾಡಿಸಿದರು. ಸಾಧಕನು ಬಹಳವಾಗಿ ಅವರ ಸೇವೆ–ಶುಶ್ರೂಷೆ ಮಾಡಿದನು. ಅನಂತರ ನಾರದರು ಹೊರಟಾಗ ಅವನು ನಾರದರನ್ನು ಕೇಳಿದನು–'ಸ್ವಾಮಿ! ನೀವು ಎಲ್ಲಿಗೆ ಹೋಗುತ್ತಿರುವಿರಿ?' ನಾರದರು ಹೇಳಿದರು– 'ನಾನು ವೈಕುಂಠಕ್ಕೆ ಭಗವಂತನ ಬಳಿಗೆ ಹೋಗುತ್ತಿದ್ದೇನೆ.' ಅವನು ನಾರದರ ಚರಣಗಳಿಗೆ ನಮಸ್ಕಾರ ಮಾಡಿ ಕೈಮುಗಿದು ಉತ್ಸಾಹದಿಂದ ದೀನನಾಗಿ ಪ್ರಾರ್ಥಿಸಿಕೊಂಡನು–'ನನಗೆ ಭಗವಂತನ ದರ್ಶನ ಯಾವಾಗ ಆಗುವುದು, ನೀವು ನನಗೋಸ್ಕರ ಆತನನ್ನು ಕೇಳಿಕೊಳ್ಳುವಿರಾ?' ನಾರದರು ಹೇಳಿದರು–'ಏಕಾಗಬಾರದು, ಖಂಡಿತ ಕೇಳಿಕೊಂಡು ನಿನಗೆ ಉತ್ತರ ಕೊಡುವೆನು.' ಹೀಗೆ ಹೇಳಿ ನಾರದರು ಅಲ್ಲಿಂದ ಹೊರಟು ಬಹಳ ಪ್ರೇಮದಿಂದ ಭಗವಂತನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ವೈಕುಂಠಧಾಮವನ್ನು ಸೇರಿದರು.

ಭಗವಂತನು ಕೇಳಿದನು–'ನಾರದ! ನೀನು ಎಲ್ಲಿಂದ ಬರುತ್ತಿರುವೆ?' ನಾರದರು ಹೇಳಿದರು–'ಒಂದು ಮರದ ಕೆಳಗೆ ನಿಮ್ಮ ಒಬ್ಬ ಭಕ್ತನು ನಿಮ್ಮ ಭಜನೆ ಧ್ಯಾನ ಮತ್ತು ತಪಸ್ಸಿನಲ್ಲಿ ತಲ್ಲೀನನಾಗಿದ್ದಾನೆ, ನಾನು ಈಗಿನ್ನೂ ಅಲ್ಲಿಂದ ಬರುತ್ತಾ ಇದ್ದೇನೆ. ಪರಮಾತ್ಮಾ! ಅವನ ಸೇವೆ–ಪೂಜೆ, ಭಜನೆ–ಧ್ಯಾನ ಮತ್ತು ತಪಸ್ಸು ಪ್ರಶಂಸೆಗೆ ಯೋಗ್ಯವಾಗಿದೆ. ಪ್ರಭು! ಅವನು ನನ್ನ ಮೂಲಕ ನಿಮ್ಮನ್ನು ಹೀಗೆ ಕೇಳುವಂತೆ ಹೇಳಿದ್ದಾನೆ–'ಅವನಿಗೆ ನಿಮ್ಮ ದರ್ಶನ ಯಾವಾಗ ಆಗುವುದು? ಭಗವಂತನು ಹೇಳಿದನು–'ನಾರದ ! ಈ ಮಾತನ್ನು ಕೇಳಬೇಡ.' ನಾರದರ ಉತ್ಸುಕತೆ ಮತ್ತಷ್ಟು ಹೆಚ್ಚಿತು. ಅವರು ಹೇಳಿದರು–'ಏಕೆ ಬೇಡ ಪರಮಾತ್ಮಾ?' ಭಗವಂತ ಉತ್ತರ ಕೊಟ್ಟನು –'ನಾರದ! ಅವನು ಯಾವ ಪ್ರಕಾರ ಭಜನೆ–ಧ್ಯಾನ, ಸೇವೆ ಶುಶ್ರೂಷೆ ಮತ್ತು ತಪಸ್ಸು ಮಾಡುತ್ತಿದ್ದಾನೆಯೋ, ಅದೇ ಪ್ರಕಾರ ಸಾಧನೆಮಾಡುತ್ತಿದ್ದರೆ ಅವನಿಗೆ ನನ್ನ ದರ್ಶನವುಂಟಾಗಲು ಬಹಳ ತಡವಾಗುವುದು. ಇದೇ ಪ್ರಕಾರ ಸಾಧನೆ ಮಾಡಿದರೆ ಅವನಿಗೆ ಆ ಅರಳೀಮರದಲ್ಲಿ ಎಷ್ಟು ಎಲೆಗಳಿವೆಯೋ, ಅಷ್ಟೇ ವರ್ಷಗಳ ನಂತರ ನನ್ನ ದರ್ಶನವಾಗುವುದು.' ಭಗವಂತನ ಈ ಮಾತನ್ನು ಕೇಳಿ ನಾರದರು ಹೆದರಿದರು, ಅವರಿಗೆ ಬಹಳ ಆಶ್ಚರ್ಯವಾಯಿತು ಮತ್ತು ಹೇಳಿದರು 'ಪರಮಾತ್ಮಾ! ಅವನಾದರೋ ಬಹಳ ಉಗ್ರವಾಗಿ ಸೇವೆ–ಶುಶ್ರೂಷೆ, ಜಪ–ಧ್ಯಾನ, ತಪಸ್ಸು ಇತ್ಯಾದಿಗಳನ್ನು ಮಾಡುತ್ತಿದ್ದಾನೆ, ಆದರೂ ಅದಕ್ಕೆ ಇಷ್ಟು ತಡವೇಕೆ?' ಭಗವಂತನು ಹೇಳಿದನು– 'ನಾರದ ! ನೀನು ಇದರ ರಹಸ್ಯವನ್ನು ತಿಳಿದಿಲ್ಲ, ನಾನು ಹೇಳುವುದನ್ನು ಅವನಿಗೆ ತಿಳಿಸಿಬಿಡು, ಅನಂತರ ನಾರದರು ಭಗವಂತನೊಡನೆ ಇನ್ನೂ ಸಹ ಭಕ್ತಿ, ಪ್ರೇಮ, ಜ್ಞಾನ, ವೈರಾಗ್ಯ ಸಂಬಂಧೀ ಚರ್ಚೆ ಮಾಡಿದರು.

ಪುನಃ ನಾರದರು ಅಲ್ಲಿಂದ ಹಿಂದಿರುಗಿ ಅದೇ ಅರಳೀ ಮರದ ಕೆಳಗಡೆ ಕುಳಿತಿರುವ ಆ ಭಕ್ತನ ಬಳಿ ಬಂದರು. ನಾರದರನ್ನು ನೋಡಿದ ಕೂಡಲೇ ಭಕ್ತನು ಅವರ ಪಾದಗಳಿಗೆರಗಿ ಬಹು ಗಾಬರಿಯಿಂದ ಕೇಳಿದನು–'ಪ್ರಭು ! ನನ್ನ ಬಗ್ಗೆಯೂ ಅಲ್ಲಿ ಚರ್ಚೆ ನಡೆಯಿತೇ?' ಅವನ ವ್ಯಾಕುಲತೆಯಿಂದ ಕೂಡಿದ ಮಾತನ್ನು ಕೇಳಿ ನಾರದರು ಮುಗ್ಧರಾದರು ಹಾಗೂ ಹೇಳಿದರು–'ನಿನ್ನ ಪ್ರಸಂಗವೇನೋ ನಡೆಯಿತು.

ಆದರೆ ಹೇಳಲು ಸಂಕೋಚವಾಗುತ್ತದೆ.' ಭಕ್ತನು ಹೇಳಿದನು-'ದೇವ ! ಸಂಕೋಚ ವೇಕೆ ? ಭಗವಂತನು ತಿರಸ್ಕಾರಮಾಡಿಬಿಟ್ಟನೇನು? ಈ ಜನ್ಮದಲ್ಲಿನನಗೆ ಭಗವಂತ ಸಿಕ್ಕುವುದಿಲ್ಲವೇ ? ಏನೇ ಆಗಲಿ, ನೀವು ನನಗೆ ತಿಳಿಸಲೇಬೇಕು. ನೀವು ಸಂಕೋಚಪಟ್ಟುಕೊಳ್ಳದಿರಿ, ನನಗೆ ಅದರಿಂದ ಯಾವ ದುಃಖವೂ ಆಗುವುದಿಲ್ಲ.'

ಅವನು ಒತ್ತಾಯಿಸಿದ ಮೇಲೆ ನಾರದರು ಎಲ್ಲಾ ವಿಚಾರವನ್ನೂ ಯಥಾವತ್ತಾಗಿ ತಿಳಿಸಿ ನಂತರ ಹೇಳಿದರು-'ಕೊನೆಯಲ್ಲಿ ಭಗವಂತನು ನಿನಗಾಗಿ ಹೀಗೆ ಹೇಳಿದನು-ಈ ಪ್ರಕಾರ ಸಾಧನೆ ಮಾಡುತ್ತಾ ಮಾಡುತ್ತಾ ಈ ಅರಳೀಮರದಲ್ಲಿ ಎಷ್ಟು ಎಲೆಗಳಿವೆಯೋ ಅಷ್ಟು ವರ್ಷಗಳ ನಂತರ ನನ್ನ ದರ್ಶನವಾಗುವುದು.' ಅಷ್ಟನ್ನು ಕೇಳಿದ ಕೂಡಲೇ ಭಕ್ತನು ಆಶ್ಚರ್ಯಚಕಿತನಾದನು ಮತ್ತು ಕರುಣಾಪೂರ್ಣಭಾವದಿಂದ ಗದ್ಗದ ಸ್ವರದಲ್ಲಿ ಹೇಳಿದನು-'ಏನು ನನ್ನಂತಹ ಅಧಮನಿಗೂ ಭಗವಂತನ ದರ್ಶನವಾಗುವುದೇ? ಈ ಮಾತನ್ನು ಭಗವಂತನು ತನ್ನ ಶ್ರೀಮುಖದಿಂದ ಹೇಳಿರುವನೇ? ಆಹಾ ! ಯಾವಾಗಲಾದರೂ ಸರಿ, ನನಗೆ ಭಗವಂತನ ದರ್ಶನವಂತೂ ಖಂಡಿತ ಆಗುವುದು ! ನಾರದರು ಹೇಳಿದರು -'ಆಗುವು ದೇನೋ ನಿಜ; ಏಕೆಂದರೆ ಭಗವಂತನು ತಾನೇ ತನ್ನ ಮುಖದಿಂದ ಹೇಳಿದ್ದಾನೆ. ಆದರೆ ಆಗುವುದು ಬಹಳ ತಡ.'ಭಗವಂತನ ದರ್ಶನ ಖಂಡಿತ ಆಗುವುದೆಂಬುದನ್ನು ಕೇಳಿ, ಆ ಭಕ್ತನ ಆನಂದಕ್ಕೆ ಮಿತಿಯೇ ಇರಲಿಲ್ಲ. ಅವನ ಭಾವ ಕೂಡಲೇ ಬದಲಾಯಿಸಿತು. ಅವನು ಆನಂದ ವಿಹ್ವಲನಾಗಿ ಪ್ರೇಮಾರ್ದ್ರಭಾವದಿಂದ ಭಗವಂತನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ಉನ್ಮತ್ತನಂತೆ ಕುಣಿದನು. ಆನಂದ ಮತ್ತು ಪ್ರೇಮಗಳಲ್ಲಿ ಅವನು ಎಷ್ಟು ನಿಮಗ್ನನಾಗಿ ಹೋಗಿದ್ದನೆಂದರೆ ಅವನಿಗೆ ತನ್ನ ಶರೀರದ ಮೇಲೆ ಪ್ರಜ್ಞೆಯೇ ಇರಲಿಲ್ಲ. ಮತ್ತೆ ವಿಳಂಬದ ಮಾತೇನು! ಭಗವಂತನು ಆ ಕ್ಷಣವೇ ಅಲ್ಲಿ ಪ್ರತ್ಯಕ್ಷನಾದನು.

ಭಗವಂತನನ್ನು ನೋಡಿ ನಾರದರು ಅವಾಕ್ಕಾಗಿ ಹೋದರು. ಅವರು ಕೇಳಿದರು-'ಪರಮಾತ್ಮಾ! ಈ ಪ್ರಕಾರ ಸಾಧನೆ ಮಾಡುತ್ತಾ ಮಾಡುತ್ತಾ ಈ ವೃಕ್ಷದಲ್ಲಿ ಎಷ್ಟು ಎಲೆಗಳಿವೆಯೋ, ಅಷ್ಟು ವರ್ಷಗಳ ನಂತರ ನನ್ನ ದರ್ಶನವಾಗುವುದೆಂದು ನೀವೇ ಹೇಳಿದ್ದಿರಿ. ಆದರೆ ವರ್ಷಗಳ ಮಾತಿರಲಿ, ಈಗಿನ್ನೂ ಒಂದು ಮುಹೂರ್ತ

ಕೂಡಾ ಕಳೆದಿಲ್ಲ, ನೀನು ಪ್ರತ್ಯಕ್ಷನಾಗಿಬಿಟ್ಟೆಯಲ್ಲಾ? ಭಗವಂತ ಹೇಳಿದನು–'ನಾರದ ! ಆ ಮಾತು ಬೇರೆಯಾಗಿತ್ತು ಮತ್ತು ಈ ಮಾತೇ ಬೇರೆಯಾಗಿದೆ. ನೀನು ಇದರ ರಹಸ್ಯವನ್ನು ತಿಳಿದುಕೊಂಡಿಲ್ಲವೆಂದು ನಾನು ನಿನಗೆ ಹೇಳಿರಲಿಲ್ಲವೇ.' ನಾರದರು ಹೇಳಿದರು–'ಪ್ರಭು ! ಇದರ ರಹಸ್ಯವೇನು, ನನಗೆ ತಿಳಿಸಿರಿ ಭಗವಂತನು ಹೇಳಿದನು–'ನಾರದ ! ಆಗಲಾದರೋ ಅವನ ಸಾಧನೆಯಲ್ಲಿ ಕ್ರಿಯೆಗೇ ಪ್ರಧಾನತೆ ಯಿತ್ತು; ಆದರೆ ಈಗಲಾದರೋ ಕ್ರಿಯೆಯ ಜೊತೆಗೆ ಇವನ ಭಾವಕ್ಕೂ ಸಹ ಪ್ರಧಾನತೆಯಿದೆ. ಸಾಧುಗಳ ಸೇವೆ–ಶುಶ್ರೂಷೆ, ವ್ರತ, ಉಪವಾಸ, ತಪಸ್ಸು, ಗೀತಾ ಪಾಠ, ಸತ್ಪುರುಷರ ಸಂಗ–ಸ್ವಾಧ್ಯಾಯ ಮತ್ತು ಭಜನೆ ಧ್ಯಾನ ಇತ್ಯಾದಿ ಸಾಧನರೂಪೀ ನನ್ನ ಭಕ್ತಿಯು ಬಹಳ ಉತ್ತಮಕ್ರಿಯೆಯಾಗಿದೆ. ಈ ಎಲ್ಲಾ ಕ್ರಿಯೆಗಳೊಡನೆ ಅನನ್ಯ ಪ್ರೇಮಭಾವ ಉಂಟಾಗುವತನಕ ಅವನಿಗೆ ವಿಳಂಬವಾಗುವುದು ಉಚಿತವೇಸರಿ. ಭಕ್ತನು ತನ್ನನ್ನು ಮರೆತು ಅನನ್ಯಪ್ರೇಮಭಾವದಲ್ಲಿ ಮುಗ್ಧನಾಗಿ ಕೇವಲ ನನ್ನ ಭಜನೆಯಲ್ಲಿಯೇ ನಿಮಗ್ನನಾದಾಗ ನಾನು ಒಂದು ಕ್ಷಣವೂ ಸಹ ತಡೆಯಲಾರೆ. ಈಗ ಇವನಿಗೆ ಅಪೂರ್ವ ಪವಿತ್ರ ಪ್ರೇಮಪೂರ್ಣ ಭಾವನೆಯಿದೆ, ಅದರ ಕಡೆಗೆ ನೋಡು, ಆಗ ಆ ಸಮಯದಲ್ಲಿ ಕ್ರಿಯೆ ಉತ್ತಮವಾಗಿದ್ದರೂ ಇವನಿಗೆ ಅಂತಹ ಭಾವವಿರಲಿಲ್ಲ. ಆದುದರಿಂದ ನಾನು ಹೀಗೆ ಹೇಳಿದ್ದೆನು–'ಈ ಪ್ರಕಾರದ ಸಾಧನೆ ಮಾಡಿದರೆ ಆ ವೃಕ್ಷದಲ್ಲಿ ಎಷ್ಟು ಎಲೆಗಳಿವೆಯೋ, ಅಷ್ಟು ವರ್ಷಗಳ ನಂತರ ನನ್ನ ದರ್ಶನವಾಗಬಹುದು.' ಈ ರಹಸ್ಯವನ್ನು ಕೇಳಿದ ನಾರದರೂ ಪ್ರೇಮ ವಿಹ್ವಲರಾದರು ಮತ್ತು ಭಾವಾವೇಶದಲ್ಲಿ ತಮ್ಮ ಎಲ್ಲಾ ಪ್ರಜ್ಞೆ ಚೇತನಗಳನ್ನು ಮರೆತು ಭಗವಂತನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ಉದ್ದಂಡ ನೃತ್ಯಮಾಡಲು ಪ್ರಾರಂಭಿಸಿದರು.

ಇಬ್ಬರು ಭಕ್ತರ ಈ ಪ್ರೇಮಮಯೀ ಸ್ಥಿತಿಯಿಂದ ಭಗವಂತ ತಾನು ಪ್ರೇಮ ಮಗ್ನನಾಗಿ ಹೋದನು. ಆತನಿಗೂ ಅದೇ ಸ್ಥಿತಿಯಾಯಿತು. ಭಗವಂತನ ಪ್ರತಿಜ್ಞೆ ಯಂತೇ ಇದು ಎಂಬುದು ಸ್ಥಿರಪಟ್ಟಿತು.

**ಯೇ ಯಥಾ ಮಾಂ ಪ್ರದದ್ಯಂತೇ ತಾಂಸ್ತಥೈವ ಭಜಾಮ್ಯಹಮ್**

(ಗೀತಾ ೪/೧೧)

ಯಾವ ಭಕ್ತನು ನನ್ನನ್ನು ಯಾವ ಪ್ರಕಾರ ಭಜಿಸುತ್ತಾನೆಯೋ, ನಾನು ಸಹ ಅವನನ್ನು ಅದೇ ಪ್ರಕಾರ ಭಜಿಸುತ್ತೇನೆ.

ಹೀಗೆ ಸ್ವಲ್ಪ ಸಮಯದವರೆಗೆ ವಿಚಿತ್ರ ಪ್ರೇಮರಾಜ್ಯದ ಪ್ರಗಾಢ ಸ್ಥಿತಿಯಲ್ಲಿದ್ದ ನಂತರ ಮೂವರಿಗೂ ಬಾಹ್ಯ ಚೇತನವುಂಟಾದಾಗ, ಅವರು ಪ್ರೇಮದಲ್ಲಿ ಮುಗ್ಧರಾಗಿ ಪರಸ್ಪರ ಮಾತನಾಡಲು ಪ್ರಾರಂಭಿಸಿದರು. ತದನಂತರ ಭಗವಂತ ಆ ಭಕ್ತನ ಸಂಗಡ ವಿಮಾನದಲ್ಲಿ ಕುಳಿತು ಪರಮಧಾಮಕ್ಕೆ ದಯಮಾಡಿಸಿದನು ಮತ್ತು ನಾರದರು ಪ್ರೇಮದಲ್ಲಿ ತಲ್ಲೀನರಾಗಿ ಭಗವಂತನ ಗುಣಗಾನ ಮಾಡುತ್ತಾ ಸೇರಬೇಕಾದ ತಮ್ಮ ಸ್ಥಾನದ ಕಡೆಗೆ ಹೊರಟರು.

ಈ ಪ್ರಸಂಗದಿಂದ ನಾವು ಈ ಪಾಠ ಕಲಿಯಬೇಕು. ಸಮಸ್ತ ಕ್ರಿಯೆಗಳಲ್ಲಿಯೂ ಭಗವಂತನ ಭಕ್ತಿ ಉತ್ತಮವಾಗಿದೆ ಮತ್ತು ಆ ಭಕ್ತಿಯ ಜೊತೆಗೆ ನಿಷ್ಕಾಮ ಮತ್ತು ಅನನ್ಯ ಪ್ರೇಮಭಾವದ ಸಮಾವೇಶ ಉಂಟಾದರೆ, ಭಗವಂತನ ಸಮಾಗಮ ದೊರೆಯಲು ಒಂದು ಕ್ಷಣವೂ ಸಹ ತಡವಾಗದು. ಆದುದರಿಂದ ನಿಷ್ಕಾಮ, ಅನನ್ಯ ಪ್ರೇಮಭಾವಪೂರ್ವಕವಾಗಿಯೇ ನಿರಂತರ ಭಜನೆ-ಧ್ಯಾನಾದಿ ಉತ್ತಮ ಕ್ರಿಯೆ ಮಾಡಬೇಕು.



# ೬. ಪ್ರವೀರನ* ಅಲೌಕಿಕ ಭಗವತ್‌ಪ್ರೇಮ

ಪ್ರವೀರನು ಮಾಹಿಷ್ಮತೀ ನರಗದ ರಾಜಾ ಶ್ರೀನೀಲಧ್ವಜನ ಮಗ. ಇವನ ತಾಯಿ ಜುಹ್ನಾದೇವಿಯು ಸರಳ, ಸಾಧ್ವೀ ಮತ್ತು ಧರ್ಮಪರಾಯಣಳಾಗಿದ್ದಳು. ಭಗದ್ಭಕ್ತಿಯ ಜೊತೆಗೆ ಆಕೆ ಬಹು ಸ್ವಾಭಿಮಾನೀ, ವೀರಾಂಗನೆ ಮತ್ತು

---

* ಬಂಗಾಳದ ಪ್ರಚಲಿತ ಲೀಲಾಭಿನಯಗಳಲ್ಲಿ ಪ್ರವೀರನ ಲೀಲೆ ಆಡುತ್ತಾರೆ. ಅದು ಬಹು ಸುಂದರ ಮತ್ತು ಮನೋಹರ. ಈ ಕಥೆಯು ಅದರ ಆಧಾರದ ಮೇಲೆ ಬರೆಯಲ್ಪಟ್ಟಿದೆ. ಇದು ಎಷ್ಟರಮಟ್ಟಿಗೆ ಸತ್ಯ ಎಂಬುದು ಗೊತ್ತಿಲ್ಲ, ಪ್ರವೀರನ ಕಥೆ 'ಜೈಮಿನೀಯ ಅಶ್ವಮೇಧ'ದಲ್ಲಿಯೂ ಸಹ ಬರುತ್ತದೆ, ಆದರೆ ಅದು ಬೇರೇ ರೂಪದಲ್ಲಿದೆ.

ಧೈರ್ಯಶಾಲಿಯೂ ಆಗಿದ್ದಳು. ಈಕೆಯ ಅತ್ಯಂತ ಪವಿತ್ರ ಜೀವನದ ಪ್ರಭಾವದ ಈಕೆಯ ಪುತ್ರ ಪ್ರವೀರನ ಮೇಲೆಯೂ ಪೂರ್ಣವಾಗಿ ಬಿತ್ತು. ಫಲಸ್ವರೂಪವಾಗಿ ಪ್ರವೀರನಲ್ಲಿಯೂ ಸರಳತೆ, ಸೌಜನ್ಯ ಸತ್ಪ್ರೇಮ ಮತ್ತು ಭಗವದ್ಭಕ್ತಿ ಒತ್ತಿ ಒತ್ತಿ ತುಂಬಿಬಂದವು. ಶೌರ್ಯವು ಅವನ ಅಂಗ ಪ್ರತ್ಯಂಗಗಳಿಂದ ಹೊರಹೊಮ್ಮುವುದು ಕಂಡುಬರುತ್ತಿತ್ತು. ಆದರೆ ಅವನು ನಿರಂತರ ಭಗವಚ್ಚಿಂತನೆ ಮತ್ತು ಆತನ ಪ್ರೇಮದಲ್ಲಿ ತನ್ಮಯನಾಗಿರುತ್ತಿದ್ದನು.

ಆ ಕಾಲದಲ್ಲಿ ಇಂದ್ರಪ್ರಸ್ಥದಲ್ಲಿ ಕೌರವರನ್ನು ಸೋಲಿಸಿ ಧರ್ಮರಾಜ ಯುಧಿಷ್ಠಿರ ಮಹಾರಾಜನು ರಾಜ್ಯಭಾರಮಾಡುತ್ತಿದ್ದನು. ಅವನು ಪರಮಾತ್ಮಾ ಶ್ರೀಕೃಷ್ಣನ ಮೇಲ್ವಿಚಾರಣೆಯಲ್ಲಿ ಅಶ್ವಮೇಧಯಜ್ಞ ಮಾಡಲು ನಿಶ್ಚಯಿಸಿದನು. ಯಜ್ಞದ ಅಶ್ವವನ್ನು ಬಿಡಲಾಯಿತು. ಅದರ ಬೆಂಗಾವಲಾಗಿ ಧನುರ್ಧರ ಅರ್ಜುನನು ನಿಯಮಿಸಲ್ಪಟ್ಟನು. ಅವನೊಡನೆ ವಿಶಾಲವಾದ ಸೈನ್ಯವಿತ್ತು. ಯಾತ್ರೆಗೆ ಮುನ್ನ ಶ್ರೀ ಕೃಷ್ಣ ಪರಮಾತ್ಮನೂ ಸಹ ಅರ್ಜುನ ಸಂಗಡ ಹೋಗುವ ಇಚ್ಛೆಯನ್ನು ಪ್ರಕಟಿಸಿದ್ದನು. ಆದರೆ ಈ ಚಿಕ್ಕ ಕಾರ್ಯಕ್ಕಾಗಿ ನಿನಗೆ ಕಷ್ಟಕೊಡುವ ಅಪೇಕ್ಷೆಯಿಲ್ಲ. ಭೂಮಂಡಲದ ಮೇಲೆ ವಿಜಯ ಪಡೆಯುವುದಕ್ಕೆ ನಾನು ಮತ್ತು ಈ ಸೈನ್ಯವೇ ಸಾಕು ಎಂದು ಹೇಳಿ ಅರ್ಜುನ ಹೊರಟನು. ಅವನ ಮುಖದ ಮೇಲೆ ಅಭಿಮಾನದ ರೇಖೆ ಹೊಳೆಯುತ್ತಿತ್ತು.

‘ವೀರವರ ಅರ್ಜುನನೊಡನೆ ಯುದ್ಧಮಾಡಲು ಯಾರಿಗೆ ಸಾಹಸವುಂಟೋ ಅವರು ಈ ಕುದುರೆಯನ್ನು ಕಟ್ಟಲಿ, ಇಲ್ಲವಾದರೆ ಉಪಹಾರ ಸಹಿತ ಮಹಾರಾಜಾ ಯುಧಿಷ್ಠಿರನ ಅಶ್ವಮೇಧ ಯಜ್ಞಕ್ಕೆ ನಿಯಮಿತ ಸಮಯದಲ್ಲಿ ಹಾಜರಾಗುವುದು’ ಎಂದು ಕುದುರೆಯ ಹಣೆಯ ಮೇಲೆ ಸ್ವರ್ಣಪತ್ರದಲ್ಲಿ ಬರೆಯಲಾಗಿತ್ತು. ಎಲ್ಲರ ಮುಂದೆಯೂ ತಲೆದೂಗುತ್ತಾ ಅದು ಹೋಗುತ್ತಾ ಅದರ ಹಿಂದೆ ವೀರವರ ಅರ್ಜುನನ ಜೊತೆಯಲ್ಲಿ ಸಶಸ್ತ್ರ ವಿಪುಲ ಪಡೆ ಹೋಗುತ್ತಿತ್ತು.

ಕುದುರೆಯ ಕಡೆಗೆ ಗಮನವಿಟ್ಟು ನೋಡುವ ಸಾಹಸ ಮಾಡುವವರು ಯಾರೂ ಕಂಡುಬರಲಿಲ್ಲ. ಮೊದಲು ಎಷ್ಟೋ ಮಂದಿ ರಾಜ ಮಹಾರಾಜರು

ಸಿಕ್ಕಿದರೂ ಕೂಡ ಎಲ್ಲರೂ ಸರ್ವತ್ರ ಸ್ವಾಗತ ಮಾಡಿದರು ಮತ್ತು ಯುಧಿಷ್ಠಿರ ಮಹಾರಾಜನ ಅಧೀನತೆಯನ್ನು ಸ್ವೀಕರಿಸಿದರು. ಇದೇ ಪ್ರಕಾರ ಆ ಅಶ್ವಮಾಹಿಷ್ಮತೀ ನಗರದ ಸಮೀಪಕ್ಕೂ ಹೋಯಿತು.

ಪ್ರವೀರನ ತಂದೆ ಮಾಹಿಷ್ಮತೀಯ ಅರಸ ನೀಲಧ್ವಜನು ಅರ್ಜುನನ ಹೆಸರು ಕೇಳಿದ ಕೂಡಲೇ ಸಂದೇಹಕ್ಕೊಳಗಾದನು. ಅವನು ಅಶ್ವವನ್ನು ಹಿಡಿಯದೇ ಇರುವುದು ಕ್ಷೇಮವೆಂದು ತಿಳಿದನು. ಆದರೆ ಈ ಸುದ್ದಿಯಿಂದ ವೀರಾಂಗನೆ ಜುಹ್ನಾದೇವಿಯು ವ್ಯಾಕುಲಪಟ್ಟುಕೊಂಡಳು. ಅವಳು ತನ್ನ ಪತಿದೇವನ ಈ ಕೃತ್ಯವನ್ನು ಹೇಡಿತನವೆಂದು ತಿಳಿದಳು ಮತ್ತು ಅನೇಕ ಪ್ರಯತ್ನವನ್ನು ಮಾಡಿದರೂ ಆತನು ತನ್ನ ಕ್ಷತ್ರಿಯತ್ವದ ಪ್ರತಿಷ್ಠೆಯ ರಕ್ಷಣೆಗಾಗಿ ಅರ್ಜುನನೊಡನೆ ಯುದ್ಧಮಾಡುವುದಕ್ಕೆ ಸಿದ್ಧನಾಗಲಿಲ್ಲ, ನೀಲಧ್ವಜನು ತನ್ನ ನಿಶ್ಚಯವನ್ನೂ ಬದಲಾಯಿಸಲಿಲ್ಲ.

ಪತಿಯಿಂದ ನಿರಾಶಳಾದ ಕೂಡಲೇ ಜುಹ್ನಾದೇವಿಯು ತನ್ನ ಪ್ರೀತಿಯ ಪುತ್ರ, ಭಕ್ತ ಪ್ರವೀರನ ಬಳಿ ಹೋದಳು, ಅವನನ್ನು ಪ್ರತಿಷ್ಠೆಯ ರಕ್ಷಣಾರ್ಥ ಸಮರಕ್ಕೆ ಪ್ರೋತ್ಸಾಹಿಸುತ್ತಾ ಹೇಳಿದಳು–'ಮಗೂ! ನಾನು ನಿನ್ನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ, ಜೊತೆಗೆ ನಿನ್ನಿಂದ ದೇಶ, ಜಾತಿ ಮತ್ತು ಸ್ವಾಭಿಮಾನದ ರಕ್ಷಣೆಯನ್ನೂ ಆಶಿಸುತ್ತೇನೆ. ಅಶ್ವಮೇಧದ ಕುದುರೆಯ ರಕ್ಷಕನಾದ ಅರ್ಜುನನ ವಿಶಾಲ ಸೇನೆಯ ಸಂಗಡ ನಿನ್ನ ಕ್ಷತ್ರಿಯತನವನ್ನು, ನಿನ್ನ ಶೌರ್ಯವನ್ನು, ನಿನ್ನ ಸ್ವತಂತ್ರತೆಯನ್ನು ಮತ್ತು ನಿನ್ನ ದೇಶಾಭಿಮಾನವನ್ನೂ ಕೆರಳಿಸಿ ಯುದ್ಧಕ್ಕೆ ಆಹ್ವಾನಿಸುತ್ತಿದೆ. ಆದರೆ ಅದು ಇಲ್ಲಿಂದ ವಿಜಯೋನ್ಮತ್ತವಾಗಿ ಹೋಗದಿರಲೆಂದು ನಾನು ಬಯಸುತ್ತೇನೆ. ನೀನು ಏಳು, ಅತಿ ಶೀಘ್ರವಾಗಿ ಎದ್ದೇಳು! ಅಶ್ವಮೇಧದ ಅಶ್ವವನ್ನು ಹಿಡಿದುಕೊಂಡು ಅರ್ಜುನನು ಹಿಂದಡಿಯಿಟ್ಟು ಹಿಂದಿರುಗಿ ಹೋಗಬೇಕಾಗುವಂತೆ ಮಾಡು. ಅವರ ಮದೋನ್ಮತ್ತ ಚತುರಂಗ ಸೇನೆಯನ್ನು ನಿನ್ನ ತೀಕ್ಷ್ಣ ಬಾಣಗಳಿಂದ ಭೇದಿಸಿ ಒಂದು ಕ್ಷಣವೂ ಸಹ ಇಲ್ಲಿ ನಿಲ್ಲದಂತೆ ಮಾಡು.'

'ಅಮ್ಮಾ! ಶ್ರೀಕೃಷ್ಣ ಸಾರಥಿಯಾಗಿರುವ ವೀರವರ ಅರ್ಜುನ.... ಪ್ರವೀರನು ಗಾಬರಿಗೊಂಡು ಹೇಳಲೂ ಆಗಲಿಲ್ಲ, ಅವನ ಸ್ನೇಹಮಯೀ ತಾಯಿಯು

ದುರ್ಗಿಯಂತೆ ಹೂಂಕರಿಸುತ್ತಾ ಹೇಳಿದಳು–'ಹೌದು, ಅದೇ ಅರ್ಜುನ ! ನೀನು ಒಂದು ಕ್ಷಣ ಯೋಚಿಸುವುದಾದರೂ ಸ್ಪಷ್ಟವಾಗಿ ಹೇಳು, ನಾನೇ ಸ್ವತಃ ಯುದ್ಧಮಾಡುವುದಕ್ಕಾಗಿ ಅರ್ಜುನನ ವಿಶಾಲ ಸೈನ್ಯದಲ್ಲಿ ಪ್ರವೇಶ ಮಾಡುವೆನು. ನಾನು ಪುತ್ರನಿಗೆ ಜನ್ಮವನ್ನೇ ಕೊಡಲಿಲ್ಲವೆಂದು ತಿಳಿದುಕೊಳ್ಳುವೆನು.'

'ಆಜ್ಞೆ ಶಿರೋಧಾರ್ಯ ಅಮ್ಮಾ! ನೀನು ನಿಶ್ಚಯವಾಗಿ ಅಂತಃಪುರಕ್ಕೆ ಹೋಗು.' ಪ್ರವೀರನ ಈ ಮಾತುಗಳಿಂದ ಸಂತುಷ್ಟಳಾದ ತಾಯಿ ಒಳಗಡೆಗೆ ಹೊರಟು ಹೋದಳು ಮತ್ತು ಪ್ರವೀರನು ಅರ್ಜುನನಿಗೆ ಪತ್ರ ಕಳುಹಿಸಿದನು. 'ನಾನು ನಿಮ್ಮ ಅಶ್ವವನ್ನು ತಡೆಯುತ್ತಿದ್ದೇನೆ. ನೀವು ರಣರಂಗಕ್ಕೆ ಬನ್ನಿ.' ದೂತನು ಉತ್ತರವನ್ನೂ ತೆಗೆದುಕೊಂಡು ಬಂದನು. ವೀರಪ್ರವೀರನು ಅದನ್ನು ಓದಿದನು–'ವೀರ ! ಕ್ಷತ್ರಿಯೋಚಿತ ಪತ್ರವನ್ನು ಓದಿ ನನಗೆ ಸಂತೋಷವಾಯಿತು. ಆದ್ದರಿಂದ ಅತ್ಯಂತ ಪ್ರಸನ್ನನಾಗಿ ನಾನು ನಿನಗೆ ಧನ್ಯವಾದ ಕೊಡುತ್ತೇನೆ. ಆದರೆ ನೀನು ಇನ್ನೂ ಹುಡುಗ, ಜೀವನದ ಆನಂದವನ್ನು ಬಿಟ್ಟು ಮೃತ್ಯು ಮುಖಕ್ಕೆ ಹೋಗಲು ಹಠಮಾಡುವುದು ಒಳ್ಳೆಯದಲ್ಲ' ಪ್ರವೀರನು ತಕ್ಷಣ ಪತ್ರ ಬರೆದನು–'ವೀರವರ ! ಹೇಡಿತನದ ಮಾತುಗಳು ನಿಮಗೆ ಶೋಭಿಸುವುದಿಲ್ಲ, ಯುದ್ಧ ಮಾಡುವ ಇಚ್ಛೆಯಿಲ್ಲದಿದ್ದರೆ ನೀವು ಇಂದ್ರಪಸ್ಥಕ್ಕೆ ಹಿಂದಿರುಗಿ ಹೋಗಬಹುದು. ಅಶ್ವವನ್ನು ನಾನು ಬಿಡುವುದಿಲ್ಲ.'

ಮತ್ತೇನಿದೆ ಮರು ದಿವಸ ಅರುಣೋದಯವಾದ ಕೂಡಲೇ ಯುದ್ಧ ಪ್ರಾರಂಭವಾಯಿತು. ಭಯಂಕರ ಹೋರಾಟ ನಡೆಯಿತು ಭಕ್ತವರ ವೀರ ಪ್ರವೀರನ ತೀಕ್ಷ್ಣಬಾಣಗಳಿಂದ ಅರ್ಜುನ ಗಾಬರಿಗೊಳಗಾದನು. ಅವನು ಪ್ರದ್ಯುಮ್ನನಿಗೆ ಹೇಳಿದನು–'ಪ್ರವೀರನು ಸುಕುಮಾರನೆಂಬ ವಿಚಾರವನ್ನು ಬಿಟ್ಟು ನೀನು ಬಾಣದ ಮಳೆ ಸುರಿಸು.' ಆದರೆ ಪ್ರದ್ಯುಮ್ನನು ತಕ್ಷಣ ಹೇಳಿದನು–'ನಿನ್ನ ಹಾಗೆಯೇ ವೀರಪ್ರವೀರನೂ ಸಹ ನನ್ನ ತಂದೆಯವರ ಪ್ರಿಯಭಕ್ತನಾಗಿದ್ದಾನೆ. ಆದುದರಿಂದ ಇವನ ಭಕ್ತಿಯು ಗಮನಕ್ಕೆ ಬಂದಕೂಡಲೇ ನನ್ನ ಕೈ ಬಳಲಿ ಹೋಗುತ್ತದೆ ಮತ್ತು ನಾನು ಪೂರ್ಣ ವೇಗದಿಂದ ಯುದ್ಧಮಾಡಲಾರೆನು.' ಅನಂತರ ಮಹಾಬಲೀ

ಭೀಮ ಮುಂದೆ ಬಂದನು. ಆದರೆ ಭಗವಚ್ಚರಣಾಶ್ರಿತ, ಭಗವಂತನ ಬಲದಿಂದ ಬಲಶಾಲಿಯಾದ ಪ್ರವೀರನ ಉತ್ಕೃಷ್ಟವಾದ ಬಾಣಗಳ ಮುಂದೆ ಅವನದೇನೂ ನಡೆಯಲಿಲ್ಲ. ಈ ಸ್ಥಿತಿಯನ್ನು ನೋಡಿ ಅತ್ಯಂತ ಕ್ರೋಧದಿಂದ ಅರ್ಜುನನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು; ಆದರೆ ಅಗ್ನಿಯ ಭೀಷಣ ಜ್ವಾಲೆಗಳು ಪ್ರವೀರನ ಬಾಣಗಳ ಜಲಧಾರೆಯ ಮುಂದೆ ತಣ್ಣಗಾಗಿ ಹೋದುವು. ಇದೇ ಪ್ರಕಾರ ಅರ್ಜುನನು ಯಾವ ಯಾವ ಭಯಂಕರ ಮತ್ತು ವಿಷಭರಿತ ಬಾಣಗಳನ್ನು ಪ್ರವೀರನ ತಲೆಯನ್ನು ತುಂಡರಿಸಲು ಪ್ರಯೋಗಿಸಿದನು, ಅವುಗಳೆಲ್ಲಾ ವ್ಯರ್ಥವಾಗಿ ಹೋದವು. ರಾಜಕುಮಾರ ಪ್ರವೀರನು ಅರ್ಜುನನ ಸಮೇತ ಅವನ ಸೈನ್ಯವನ್ನು ಪರಾಭವ ಗೊಳಿಸಿದನು.

ಅರ್ಜುನನ ವೀರ ತೇಜಸ್ಸಿನ ಮುಖ ಮಂಡಲದ ಮೇಲೆ ವಿಷಾದ ಆವರಿಸಿತು. ಅದೇ ಸಮಯಕ್ಕೆ ಪ್ರವೀರನು ಬಂದು ಹೇಳಿದನು–'ವೀರವರ ಅರ್ಜುನ ಅಶ್ವಮೇಧದ ಕುದುರೆಯನ್ನು ಇದೇ ಬಲದ ಮೇಲೆ ಬಿಡಲಾಗಿತ್ತು. ನಾನು ನಿಮಗೆ ಸ್ಪಷ್ಟವಾಗಿ ತಿಳಿಸುತ್ತೇನೆ–ನಿಮಗೆ ನಿಮ್ಮ ಪ್ರಾಣದ ಮೇಲೆ ಆಸೆಯಿಲ್ಲದಿದ್ದರೆ ನಾಳೆ ಪುನಃ ಸಮರ ಭೂಮಿಗೆ ಬರಬಹುದು, ಇಲ್ಲವಾದರೆ ಈಗ ಸುಖವಾಗಿ ಹಿಂದಿರುಗಿ ಹೋಗಿರಿ ಮತ್ತು ಯಾವ ದಿವಸ ಈ ಕುದುರೆಯಿಂದ ನಾನು ಅಶ್ವಮೇಧ ಯಜ್ಞ ಮಾಡುವೆನೋ, ಆ ದಿವಸ ಕಾಣಿಕೆ ತೆಗೆದುಕೊಂಡು ಬನ್ನಿರಿ. ಶ್ರೀಕೃಷ್ಣಪರಮಾತ್ಮನ ಸಹಾಯವಿಲ್ಲದೆ ನೀವು ನನ್ನ ಮೇಲೆ ವಿಜಯವನ್ನು ಎಂದಿಗೂ ಸಾಧಿಸಲಾರಿರಿ. ನನ್ನನ್ನು ಗೆಲ್ಲಬೇಕೆಂಬ ಅಪೇಕ್ಷೆಯಿದ್ದರೆ ಶ್ರೀಕೃಷ್ಣನನ್ನು ಕರೆಸಿರಿ, ಆತನ ದರ್ಶನ ಮಾಡಿ ನಾನೂ ಕೃತಕೃತ್ಯನಾಗುವೆನು.' ಪ್ರವೀರನು ಕೆಲವು ಕ್ಷಣ ಭಗವಂತನ ಧ್ಯಾನದಲ್ಲಿ ತನ್ಮಯನಾಗಿ ಹೋದನು.

ಆದರೆ ಪ್ರವೀರನ ಮಾತು ಅರ್ಜುನನ ಹೃದಯದಲ್ಲಿ ಬಾಣದ ಹಾಗೆ ಪ್ರವೇಶ ಮಾಡಿತು. ಈಗ ಭಗವಂತನ ಮುಂದೆ ಅಭಿಮಾನದ ಮಾತುಗಳನ್ನು ಹೇಳಿದ್ದು ತನ್ನ ತಪ್ಪು ಎಂಬ ಅರಿವು ಅವನಿಗುಂಟಾಯಿತು. ತಕ್ಷಣ ವ್ಯಾಕುಲಗೊಂಡು ಭಗವಂತನನ್ನು ಪ್ರಾರ್ಥಿಸಿಕೊಂಡನು – 'ಹೇ ಶ್ರೀಹರಿ ! ಹೇ

ಗೋವಿಂದ !! ಹೇ ವಾಸುದೇವ !! ಹೇ ನಾರಾಯಣ !! ನನ್ನ ಅನುಚಿತ ಮಾತುಗಳನ್ನು ಕ್ಷಮಿಸು. ನೀನು ಸರ್ವಜ್ಞ, ಸರ್ವಶಕ್ತಿವಂತ, ಮತ್ತು ಸರ್ವೇಶ್ವರನಾಗಿರುವೆ. ನೀನು ಬೇಗ ಬಂದು ನನ್ನನ್ನು ರಕ್ಷಿಸು. ಅರ್ಜುನನ ಕೂಗನ್ನು ಕೇಳಿದ ಕೂಡಲೇ ಭಕ್ತ-ಭಯ-ಭಂಜನ ಪರಮಾತ್ಮನು ಇದುವರೆಗೆ ಇಲ್ಲಿಯೇ ಎಲ್ಲೋ ಬಚ್ಚಿಟ್ಟುಕೊಂಡಿದ್ದನೋ ಎಂಬಂತೆ ತಕ್ಷಣ ಪ್ರತ್ಯಕ್ಷನಾದನು.

ಭಗವಂತನನ್ನು ನೋಡಿದ ಕೂಡಲೇ ಅರ್ಜುನನು ಆತನ ಪಾದಗಳಿಗೆ ಎರಗಿದನು. ಪ್ರಭು ದೃಷ್ಟಿ ತಿರುಗಿಸಿ ನೋಡಿದನು, ಪ್ರವೀರನೂ ಸಹ ಪ್ರಭುವಿನ ಪಾವನ ಚರಣಗಳಲ್ಲಿ ದಂಡದಂತೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದಾನೆ. ಭಗವಂತನು ಅರ್ಜುನ ಮತ್ತು ಪ್ರವೀರ ಇಬ್ಬರನ್ನೂ ಸಂಧಿಸಿದನು. ಪ್ರವೀರನು ಗದ್ಗದಿತನಾಗಿ ಹರ್ಷಾತಿರೇಕದಿಂದ ಹೇಳಿದನು-'ಪ್ರಭು ! ನಿನ್ನ ದರ್ಶನ ಪಡೆದು ನಾನಿಂದು ಧನ್ಯನಾದೆ.' ಅವನು ಪುನಃ ಅರ್ಜುನನಿಗೆ ಹೇಳಿದನು-'ಪಾರ್ಥ! ನಾನೂ ನಿನಗೂ ಋಣಿಯಾಗಿದ್ದೇನೆ. ನಿನ್ನ ಕೃಪೆಯಿಂದಲೇ ನನಗೆ ಈ ದಿನ ಶ್ಯಾಮಸುಂದರನ ತ್ರೈಲೋಕ್ಯಪಾವನ ಮಧುರ ಮನೋಹರ ದರ್ಶನ ಮಾಡುವ ಸೌಭಾಗ್ಯ ಸಿಕ್ಕಿತು. ಈಗ ನಾವು ನಮ್ಮ ಶಿಬಿರಕ್ಕೆ ಹೋಗೋಣ. ನಾಳೆಯಿಂದ ಭಗವಂತನ ಮುಂದೆಯೇ ಯುದ್ಧ ನಡೆಯುವುದು. ನಂತರ ಇಬ್ಬರೂ ತಮ್ಮ ತಮ್ಮ ಶಿಬಿರಕ್ಕೆ ಹೋದರು.

ಪ್ರವೀರನನ್ನು ನೋಡಿದಕೂಡಲೇ ಜುಹ್ವಾದೇವಿಯು ಅವನನ್ನು ಎದೆಗಪ್ಪಿ ಕೊಂಡು ಹೇಳಿದಳು-'ಮಗೂ! ನಿನ್ನ ವಿಜಯಕ್ಕಾಗಿ ನಾನು ಭಗವತೀ ಭಾಗೀರಥಿ ಯನ್ನು ಆರಾಧಿಸಲು ಹೋಗುತ್ತಿದ್ದೇನೆ.' ಪ್ರವೀರನ ವೀರಹೃದಯೀ ಧರ್ಮಪಾಲನಾ ಪತ್ನೀ ಮದನಮಂಜರಿಯು ಅತ್ಯಂತ ಆನಂದ ಭರಿತಳಾಗಿ ಹೇಳಿದಳು- 'ಶ್ರೀಕೃಷ್ಣ ಪರಮಾತ್ಮನನ್ನು ನನ್ನ ಭಕ್ತಿಯಿಂದ ಪ್ರಸನ್ನಗೊಳಿಸಿ ನಾನೂ ನಿಮ್ಮ ವಿಜಯಕ್ಕಾಗಿ ಆತನಲ್ಲಿ ಪ್ರಾರ್ಥಿಸಿಕೊಳ್ಳುವೆನು.' ಪ್ರವೀರನೂ ಭಗವಂತನ ಧ್ಯಾನದಲ್ಲಿ ತಲ್ಲೀನನಾದನು.

ಅರ್ಧರಾತ್ರಿ ಕಳೆಯಿತು, ಈ ಕಡೆ ಪ್ರವೀರನ ಪತ್ನೀ ಮದನಮಂಜರಿಯು ಅರ್ಜುನನ ಸೈನ್ಯವು ನಿದ್ರಿಸುತ್ತಿರುವಾಗ ಅಲ್ಲಿಗೆ ಪ್ರವೇಶಮಾಡಿದಳು. ಅವಳ ಕೈಯಲ್ಲಿ ಉದ್ದವಾದ ಬಿಚ್ಚು ಕತ್ತಿಯಿತ್ತು. ಪಹರೆಯವನ ಜಾಗದಲ್ಲಿ ಭಗವಾನ್ ಶಂಕರನು

ತ್ರಿಶೂಲ ಹಿಡಿದು ನಿಂತಿದ್ದನು. ಆತನು ಮದನಮಂಜರಿಯ ಪರಿಚಯ ಮತ್ತು ಅರ್ಧರಾತ್ರಿಯಲ್ಲಿ ಖಡ್ಗವನ್ನು ತೆಗೆದುಕೊಂಡು ಶಿಬಿರಕ್ಕೆ ಬಂದ ಕಾರಣ ಕೇಳಿದನು.

ಮದನಮಂಜರಿಯು ನಿಸ್ಸಂಕೋಚವಾಗಿ ಸತ್ಯವನ್ನೇ ಹೇಳಿದಳು.

'ನಾನು ಪ್ರವೀರನ ಪತ್ನಿ ನನ್ನ ಪತಿಯ ಪ್ರಾಣ ರಕ್ಷಣೆಗಾಗಿ ಶ್ರೀಕೃಷ್ಣ ಪರಮಾತ್ಮನ ಬಳಿಗೆ ಹೋಗಲಿಚ್ಛಿಸುತ್ತೇನೆ.'

ಭಗವಾನ್ ಶಂಕರನು ಹೇಳಿಬಿಟ್ಟನು–'ಅದು ಅಸಂಭವ, ಭಗವಂತನು ನಿದ್ರಿಸುತ್ತಿದ್ದಾನೆ. ನೀನು ಹಿಂದಿರುಗಿ ಹೋಗು.'

'ಹಾಗಿದ್ದರೆ ನಿಮ್ಮ ಪಾದಗಳ ಮೇಲೆ ಈ ತಲೆಯು ಈಗಲೇ ಉರುಳಿ ಹೋಗುವುದು' ಎಂದು ಹೇಳುತ್ತಾ ಮದನ ಮಂಜರಿಯು ಕತ್ತಿಯನ್ನು ಮೇಲಕ್ಕೆತ್ತಿ ದಳು.

ಭಗವಾನ್ ಶಂಕರನು ತನ್ನ ಪರಿಚಯ ಮಾಡಿಕೊಡುತ್ತಾ ಹೇಳಿದನು– 'ನಾನು ನಿನ್ನ ಮೇಲೆ ಅತ್ಯಂತ ಪ್ರಸನ್ನನಾಗಿದ್ದೇನೆ ಮತ್ತು ಕೈಲಾಸಕ್ಕೆ ಹೋಗುತ್ತಿದ್ದೇನೆ. ಇಲ್ಲಿಂದ ಪ್ರಯಾಣ ಮಾಡಿದ ನಂತರ ನನ್ನದೇನೂ ಜವಾಬ್ದಾರಿಯಿಲ್ಲ.'

ಮದನಮಂಜರಿಯು ಶ್ರೀಕೃಷ್ಣನ ಶಿಬಿರದ ಬಾಗಿಲಿಗೆ ಹೋದಾಗ ದ್ವಾರಪಾಲಕರು ಗದರಿಸುತ್ತಾ ಅಲ್ಲಿಗೆ ಬಂದ ಕಾರಣವನ್ನು ಕೇಳಿದನು. ಆಕೆಯು ವಿನಯದಿಂದ ದ್ವಾರಪಾಲಕನಲ್ಲಿಯೂ ಹೇಳಿದಳು–'ನನ್ನ ಪ್ರಾಣಧನನ ಪ್ರಾಣದ ಭಿಕ್ಷೆ ಬೇಡಲು ಮಹಾರಾಜಾ ನೀಲಧ್ವಜನ ಸೊಸೆಯಾದ ನಾನು ಶ್ರೀಕೃಷ್ಣಪರಮಾತ್ಮನ ಚರಣಗಳ ಸಮೀಪಕ್ಕೆ ಹೋಗಲು ಬಯಸಿ ಬಂದಿದ್ದೇನೆ.'

ದ್ವಾರಪಾಲಕನು ಹೇಳಿದನು–'ಇಲ್ಲಿಂದ ಹಿಂದಿರುಗಿ ಹೋಗು. ಪ್ರಭು ಈಗ ನಿದ್ರೆ ಮಾಡುತ್ತಿದ್ದಾನೆ.'

ಮದನಮಂಜರಿಯು ಕತ್ತಿಯನ್ನೆತ್ತಿ ಹೇಳಿದಳು–'ನೀನು ಭಗವಂತನ ಬಳಿಗೆ ಹೋಗಲು ಬಿಡದೇ ಹೋದರೆ ನಾನು ಈಗಲೇ ನನ್ನ ತಲೆಯನ್ನು ಕತ್ತರಿಸಿ ನಿನ್ನ ಪಾದಗಳಿಗೆ ಅರ್ಪಿಸಿಬಿಡುತ್ತೇನೆ.'

ದ್ವಾರಪಾಲಕನು ಮದನಮಂಜರಿಯ ಕೈಯನ್ನು ಹಿಡಿದುಕೊಂಡಾಗ ಅವಳು ನೋಡಿದಳು–ಇವನೇ ಆ ತ್ರೈಲೋಕ್ಯನಾಥ ಮದನಮೋಹನ ಶ್ಯಾಮಸುಂದರ ಭಗವಾನ್ ಶ್ರೀಕೃಷ್ಣ! ಆತನಿಗಾಗಿಯೇ ಅವಳು ಪ್ರಾಣದ ಜೊತೆ ಆಟವಾಡಿ ಬಂದಿದ್ದಳು. ಅವಳು ಪ್ರಭುವಿನ ಪಾದಗಳ ಮೇಲೆ ಬಿದ್ದಳು. ಸ್ವಲ್ಪ ಸಮಯದ ನಂತರ ಅವಳು ಹೇಳಿದಳು–'ಪ್ರಭೂ ! ನೀನಾದರೋ ಅಂತರ್ಯಾಮಿ, ಆದರೂ ಹೇಳದೆ ನನ್ನಿಂದ ಇರಲಾಗುವುದಿಲ್ಲ. ಬೆಳಗ್ಗೆಯೇ ಧನುರ್ಧರ ಅರ್ಜುನನ ಜೊತೆ ನನ್ನ ಪತಿದೇವನ ಯುದ್ಧವಾಗಲಿದೆ. ಧನುರ್ಧರ ಅರ್ಜುನನಿಗೆ ನಿನ್ನ ಸಹಾಯ ದೊರೆತಿದೆ ಮತ್ತು ನಿನ್ನ ಸಹಾಯ ಪಡೆದುಕೊಂಡು ಆತ ಏನು ಬೇಕಾದರೂ ಮಾಡಬಲ್ಲನು. ಆದ್ದರಿಂದ ನಾನು ನಿನ್ನಿಂದ ನನ್ನ ಜೀವನ ಧನನ ಪ್ರಾಣದ ಭಿಕ್ಷೆ ಬೇಡುತ್ತೇನೆ.

ತನ್ನ ಕೌಮೋದಕೀ ಗದೆ ಮತ್ತು ಸಹಸ್ರಾರ ಸುದರ್ಶನ ಚಕ್ರವನ್ನು ಆಕೆಯ ಕೈಗೆ ಕೊಡುತ್ತಾ ಭಕ್ತವತ್ಸಲ ಕರುಣಾಮಯ ಭಗವಂತನು ಹೇಳಿದನು–'ಇವುಗಳನ್ನು ಪ್ರವೀರನು ತನ್ನ ಹತ್ತಿರ ಇಟ್ಟುಕೊಂಡಿರುವವರೆಗೂ ಯುದ್ಧದಲ್ಲಿ ಅವನನ್ನು ಯಾರೂ ಕೊಲ್ಲಲಾರರು.' ಮಂದನಮಂಜರಿಯು ಭಗವಂತನ ಚರಣಗಳಿಗೆ ವಂದಿಸಿ ಹಿಂದಿರುಗಿ ಬಂದು ಎರಡು ಆಯುಧಗಳನ್ನು ತನ್ನ ಪತಿಗೆ ಕೊಟ್ಟಳು ಹಾಗೂ ಭಗವಂತನ ಮಾತುಗಳನ್ನೂ ತಿಳಿಸಿದಳು.

ಆ ಕಡೆ ಧರ್ಮಪರಾಯಣೆಯಾದ ಜುಹ್ನಾದೇವಿಯು ಶ್ರೀಗಂಗಾಮಾತೆಯನ್ನು ಸಂತುಷ್ಟಗೊಳಿಸಿದಳು ಮತ್ತು ತನ್ನ ತ್ರಿಶೂಲದ ಸಹಿತ ಪ್ರವೀರನ ಪಕ್ಷದ ವತಿಯಿಂದ ಯುದ್ಧಮಾಡುವಂತೆ ಶಿವನಲ್ಲಿ ಪ್ರಾರ್ಥಿಸಿಕೊಳ್ಳುವಂತೆಯೂ ಹೇಳಿದಳು. ಗಂಗಾಮಾತೆಯ ಪ್ರಾರ್ಥನೆಯನ್ನು ಕೇಳಿದ ಕೂಡಲೇ ಶೀಘ್ರ ತೃಪ್ತನಾಗುವ ಮಹಾದೇವನು ಹೇಳಿದನು–'ಅರ್ಜುನನ ಜೊತೆ ಶ್ರೀಕೃಷ್ಣನಿದ್ದಾನೆ ಮತ್ತು ಆತನ ಎದುರಿಗೆ ಸಮರಕ್ಕಿಳಿಯುವುದು ನನಗೆ ಅಸಂಭವ'

ಪ್ರಾತಃಕಾಲವಾದ ಕೂಡಲೇ ಅರ್ಜುನ ತನ್ನ ಮಿತ್ರ ಶ್ರೀಕೃಷ್ಣನ ಬಳಿಗೆ ಹೋಗಿ ನೋಡಿದರೆ ಆತನು ಉದಾಸೀನ ಮತ್ತು ಚಿಂತೆಯೊಡಗೂಡಿ

ತಲೆತಗ್ಗಿಸಿಕೊಂಡು ಕುಳಿತಿದ್ದಾನೆ. ಅರ್ಜುನನನ್ನು ನೋಡಿದ ಕೂಡಲೇ ಆತನು ಹೇಳಿದನು-'ಬಂಧು ಶ್ರೇಷ್ಠನೇ! ಪ್ರವೀರ ಪತ್ನಿಯ ಭಕ್ತಿಯಿಂದ ಸಂತುಷ್ಟನಾಗಿ ನನ್ನ ಎರಡು ಆಯುಧಗಳನ್ನು ನಾನು ಅವಳಿಗೆ ಸಮರ್ಪಿಸಿಬಿಟ್ಟಿರುವೆನು. ಆ ಆಯುಧಗಳು ಅವನ ಬಳಿಯಿರುವವರೆಗೂ, ನೀನು ಅವನಿಗೆ ಯಾವ ತೊಂದರೆಯನ್ನೂ ಮಾಡಲಾರೆ, ನಾನಿಲ್ಲಿರುವಾಗಲೆಲ್ಲಾ ನಿನ್ನ ಶುಭಕ್ಕೆ ವಿಘ್ನವೇ ಬಂದೊದಗುತ್ತದೆ.'

ಭಗವಂತನ ಮಾತುಗಳನ್ನು ಕೇಳಿದ ಕೂಡಲೇ ಭೀಮ ಕುಪಿತನಾದನು. ಅವನು ಹೇಳಿದನು-'ನೀನು ಯೋಚಿಸಿ ನೋಡಿ ವರದಾನ ಮಾಡಬೇಕಾಗಿತ್ತು. ನೀನು ನಮ್ಮ ರಕ್ಷಣೆಗಾಗಿ ಬಂದಿರುವಿಯೋ ಅಥವಾ ಮತ್ತಷ್ಟು ವಿಪತ್ತನ್ನು ತಂದು ಹಾಕಲು ಇಲ್ಲಿಗೆ ಬಂದೆಯೋ?' ಆದರೆ ಭೀಮನನನ್ನು ಬಹಳ ವಿನಯದಿಂದ ಸುಮ್ಮನಿರಿಸುತ್ತಾ ಅರ್ಜುನನು ಸರಳ ವಿಶ್ವಾಸಪೂರ್ವಕವಾಗಿ ಭಗವಂತನೊಡನೆ ನಮ್ರತೆಯಿಂದ ಹೇಳಿದನು-'ಇದೇನು ಹೇಳುತ್ತಿರುವೇ ಪ್ರಭು ! ನಿನ್ನ ಪ್ರತಿಯೊಂದು ಕ್ರಿಯೆಯಲ್ಲಿಯೂ ಮಂಗಳವೇ ಅಡಗಿರುತ್ತದೆ, ಇದರಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಈ ಆಯುಧ ದಾನದಲ್ಲಿಯೂ ಏನಾದರೂ ನನ್ನ ಹಿತವೇ ಇದೆ. ನಾನು ಸಂಪೂರ್ಣವಾಗಿ ನಿಶ್ಚಿಂತನಾಗಿದ್ದೇನೆ. ನೀನೇ ನನ್ನ ಸರ್ವಸ್ವ. ನೀನೇ ಈ ಯಜ್ಞದ ಅನುಷ್ಠಾನಕ್ಕೆ ಪ್ರೇರಣೆ ಮತ್ತು ಇದರ ನಿರ್ವಿಘ್ನ ಸಮಾಪ್ತಿಗೆ ಮಾತು ಕೊಟ್ಟಿರುವೆ. ನಿನಗೆ ಹೇಗೆ ಸರಿಯೆನಿಸುವುದೋ ಹಾಗೆಯೇ ಮಾಡು.'

ಶ್ರೀಕೃಷ್ಣಪರಮಾತ್ಮನು ಸುಮ್ಮನಿದ್ದನು. ಆತನಿಗೆ ತನ್ನನ್ನೇ ಅವಲಂಬಿಸಿರುವ ಅರ್ಜುನನ ಚಿಂತೆ. ಆತನಿಗೆ ಮಾತನಾಡಲಾಗಲಿಲ್ಲ. ಅರ್ಜುನನು ಪುನಃ ಹೇಳಿದನು-'ಪ್ರಭು ! ಪ್ರಾತಃಕಾಲ ಕಳೆಯಿತು. ಯುದ್ಧದ ಸಮಯ ಬರುತ್ತಿದೆ. ಈಗ ನಿನ್ನ ಆಜ್ಞೆಯೇನು?'

ಭಗವಂತ ಹೇಳಿದನು-'ಬಾ, ಶಂಕರನ ಬಳಿ ಹೋಗೋಣ. ಆತನು ಏನಾದರೂ ಯುಕ್ತಿಯನ್ನು ಯೋಚಿಸಿ, ಹೇಳಬಹುದು. ಅವರಿಬ್ಬರೂ ಭಗವಾನ್ ಶಂಕರನ ಹತ್ತಿರ ಹೋದರು. ಅಲ್ಲಿ ಶ್ರೀಕೃಷ್ಣನು ಹೇಳಿದನು-'ಪರಮಾತ್ಮಾ ! ಪ್ರವೀರನ ಪತ್ನಿಯ ಭಕ್ತಿಗೆ ಮುಗ್ಧನಾಗಿ ನಾನು ಕೌಮೋದಕೀ ಗದೆ ಹಾಗೂ ಚಕ್ರವನ್ನೂ

ಅವಳ ಪತಿಗೋಸ್ಕರ ಕೊಟ್ಟುಬಿಟ್ಟಿದ್ದೇನೆ. ಅವುಗಳು ಪ್ರವೀರನ ಹತ್ತಿರ ಇರುವವರೆಗೂ ಯುದ್ಧದಲ್ಲಿ ಅವನನ್ನು ಯಾರೂ ಕೊಲ್ಲಲಾರರು. ಈಗ ಅರ್ಜುನ ಹೇಗೆ ವಿಜಯಿಯಾಗುವುದು, ಇದಕ್ಕೆ ಉಪಾಯವನ್ನು ತಿಳಿದುಕೊಳ್ಳಲು ನಾವಿಬ್ಬರೂ ನಿನ್ನ ಸೇವೆಗಾಗಿ ಬಂದಿದ್ದೇವೆ.'

ಶಂಕರನು ಹೇಳಿದನು-'ಸರ್ವಜ್ಞನಾಗಿದ್ದರೂ ನೀನು ಅವಳಿಗೆ ವರದಾನವನ್ನು ಹೇಗೆ ಮಾಡಿಬಿಟ್ಟೆ?' ಶ್ರೀಕೃಷ್ಣನು ಉತ್ತರ ಕೊಟ್ಟನು-'ಯಾವ ರೀತಿಯಲ್ಲಿ ಆಕೆಯ ಭಕ್ತಿಗೆ ಮುಗ್ಧನಾಗಿ ನೀನು ಕೈಲಾಸಕ್ಕೆ ರಾತ್ರಿ ಹೊರಟುಹೋದೆಯೋ ಅದೇ ಪ್ರಕಾರ ಭಕ್ತಿ-ವಿವಶನಾಗಿ ನಾನೂ ಸಹ ವರಕೊಡಬೇಕಾಯಿತು.'

ಭಗವಾನ್ ಶಂಕರನು ಮೆಲ್ಲ ಮೆಲ್ಲನೆ ಹೇಳಿದನು-'ನಾನೂ ಸಹ ಬಹಳ ಪೇಚಾಟದಲ್ಲಿ ಸಿಕ್ಕಿಬಿದ್ದಿರುವೆನು. ಅಲ್ಲಿ ಪ್ರವೀರನ ತಾಯಿ ಜುಹ್ನಾದೇವಿಯ ಆರಾಧನೆಯಿಂದ ಸಂತುಷ್ಟಳಾಗಿ ಗಂಗಾದೇವಿಯು ಪ್ರವೀರನ ಪಕ್ಷವಹಿಸಿ ತ್ರಿಶೂಲ ತೆಗೆದುಕೊಂಡು ಅರ್ಜುನನೊಡನೆ ಯುದ್ಧ ಮಾಡುವಂತೆ ಆಗ್ರಹಪಡಿಸುತ್ತಿದ್ದಾಳೆ. ಇಲ್ಲಿ ನಿಮ್ಮ ಪ್ರಾರ್ಥನೆ.ಇಂತಹ ಸ್ಥಿತಿಯಲ್ಲಿ, ನಾನು ಯಾರ ಪಕ್ಷದವತಿಯಿಂದಲೂ ಯುದ್ಧಭೂಮಿಗೆ ಇಳಿಯುವುದಿಲ್ಲವೆಂದು ನಿಶ್ಚಯಮಾಡಿಕೊಂಡಿದ್ದೇನೆ.'

ನಿರಾಶಾಭಾವ ತುಂಬಿದ ಸ್ವರಗಳಲ್ಲಿ ಭಗವಂತನು ಅರ್ಜುನನೊಡನೆ ಹೇಳಿದನು. 'ಅಯ್ಯಾ ಅರ್ಜುನ! ನನ್ನ ಮಿತಿ ಇಲ್ಲಿಯವರೆಗಿತ್ತು ಮತ್ತು ಈತನು ಸ್ಪಷ್ಟವಾಗಿ ಉತ್ತರ ಕೊಟ್ಟುದಾಯಿತು. ಈಗ ಮಾಡುವುದೇನು.' ಅರ್ಜುನನು ಉತ್ತರ ಕೊಟ್ಟನು-'ಮಹಾಪ್ರಭು! ನನಗೇನೂ ಗೊತ್ತಿಲ್ಲ. ನಾನು ಕೇವಲ ಇಷ್ಟು ಮಾತ್ರ ತಿಳಿದುಕೊಂಡಿದ್ದೇನೆ- ನೀನು ಏನೆಲ್ಲಾ ಮಾಡುವೆಯೋ, ಅದರಲ್ಲಿ ನನ್ನ ಹಿತ ಖಂಡಿತವಾಗಿದೆ. ಸರಿ, ಯುದ್ಧದ ಸಮಯ ಸಮೀಪಿಸುತ್ತಾ ಇದೆ.'

ಭಗವಂತನು ಒಂದು ಕ್ಷಣ ಯೋಚಿಸಿ, ನಂತರ ಅರ್ಜುನನ ಸಹಿತ ಭಗವತಿ ಉಮಾದೇವಿಯ ಹತ್ತಿರಕ್ಕೆ ತೆರಳಿದನು. ಅಲ್ಲಿ ಆತನು ಯುಧಿಷ್ಠಿರ ಮಹಾರಾಜನ ಅಶ್ವಮೇಧ ಯಜ್ಞಾನುಷ್ಠಾನ ಮತ್ತು ಪ್ರವೀರನ ಅಡ್ಡಿ ಹಾಗೂ ತನ್ನ ಆಯುಧಗಳೆರಡರ ಮತ್ತು ವರದಾನದ ಮಾತನ್ನೂ ಸಹ ತಿಳಿಸಿ, ಅರ್ಜುನನ

ವಿಜಯಕ್ಕಾಗಿ ಪ್ರಾರ್ಥಿಸಿ ಕೊಳ್ಳುತ್ತಾ ಹೇಳಿದನು–'ನೀನು ಸಮರ ಭೂಮಿಗೆ ಮೋಹಿನೀರೂಪದಲ್ಲಿ ಬಂದು ಅವನಿಂದ ಆಯುಧಗಳನ್ನು ತೆಗೆದುಕೊಂಡರೆ ನಾವಿಬ್ಬರೂ ನಿಶ್ಚಿಂತರಾಗುತ್ತೇವೆ.' ಭಗವತೀ ಉಮಾದೇವಿಯು 'ತಥಾಸ್ತು' ಎಂದು ಹೇಳಿಬಿಟ್ಟಳು. ಶ್ರೀಕೃಷ್ಣನೂ ಇದನ್ನೇ ಇಚ್ಛಿಸಿದ್ದನು. ಅರ್ಜುನನ ಸಂಗಡ ಹಿಂದಿರುಗಿದನು.

ಅರ್ಜುನನು ಯುದ್ಧಭೂಮಿಗೆ ಹೋದಾಗ ಅವನು ಕಂಡುದೇನು ಪ್ರವೀರನು ತನ್ನ ವಿಶಾಲ ಸೈನ್ಯ ವಾಹಿನಿಯೊಂದಿಗೆ ಯುದ್ಧದ ನಿರೀಕ್ಷಣೆ ಮಾಡುತ್ತಿದ್ದಾನೆ, ಯುದ್ಧ ಪ್ರಾರಂಭವಾಗುವುದರಲ್ಲಿತ್ತು. ಅಷ್ಟರಲ್ಲಿ ಪ್ರವೀರನು ತನ್ನೆದುರಿನಲ್ಲಿ ಆಕಾಶದಲ್ಲಿ ಓರ್ವ ನವಯೌವನ ಸಂಪನ್ನೆ ಅಪೂರ್ವ ಲಾವಣ್ಯವತಿ ಸುಂದರಿಯನ್ನು ನೋಡಿದನು. ವಿಶ್ವದಲ್ಲಿ ಇಂತಹ ಸೌಂದರ್ಯವು ಉಂಟೆಂದು ಕಲ್ಪನೆಯೂ ಸಹ ಇರಲಿಲ್ಲ. ನಡೆಯಲಾಗದ ಘಟನೆ ನಡೆದು ಪರದೆಯಂತೆ ಮಾಯೆಯು ಜಿತೇಂದ್ರಿಯ ಭಕ್ತ ಪ್ರವೀರನ ಬುದ್ಧಿಯಲ್ಲಿ ಮೋಹವನ್ನು ಉತ್ಪತ್ತಿ ಮಾಡಿತು ಮತ್ತು ಅವನು ಒಬ್ಬ ವಿಷಯಾಸಕ್ತ ಮನುಷ್ಯನಂತೆ ಆ ದೇವಿಯಲ್ಲಿ ಪ್ರಣಯ ಭಿಕ್ಷೆ ಬೇಡಲಾರಂಭಿಸಿದನು. ಮಾಯೆಯದು ಇಂತಹುದೇ ಮಹಿಮೆಯಾಗಿದೆ.

ಪರಮ ಸುಂದರೀ ದೇವಿಯು ಹೇಳಿದಳು–'ಯುದ್ಧಭೂಮಿಯಲ್ಲಿ ಪ್ರೇಮದ ಮಾತು ಪ್ರಲಾಪದಂತಾಗುತ್ತದೆ. ನೀನು ನಿಜವಾಗಿಯೂ ಪ್ರೇಮದಾನವನ್ನು ಬಯಸುವುದಾದರೆ ನಿನ್ನ ಆಯುಧಗಳನ್ನು ಎಸೆದು ಬಿಡು.' ಮಾಯಾಮೋಹಿತನಾದ ಪ್ರವೀರನು ಆ ಸಮಯದಲ್ಲಿ ಮೂಢನಾಗಿ ಹೋಗಿದ್ದನು. ಅವನು ಶ್ರೀಕೃಷ್ಣ ಕೊಟ್ಟಿದ್ದ ಎರಡು ಆಯುಧಗಳನ್ನೂ ಬಿಸಾಡಿಬಿಟ್ಟನು. ಭಗವತಿಯು ಅವುಗಳನ್ನು ಎತ್ತಿಕೊಂಡು ತಕ್ಷಣ ಅಂತರ್ಧಾನವಾದಳು. ಮಾಯೆಯ ತೆರೆ ಹರಿಯಿತು, ಪ್ರವೀರನಿಗೆ ಜ್ಞಾನೋದಯವಾಯಿತು. ಅವನು ಮನಸ್ಸಿನಲ್ಲಿಯೇ ಪಶ್ಚಾತ್ತಾಪ ಪಡುತ್ತಾ ಹೇಳಿದನು–'ನಾನೆಂತಹ ಅನರ್ಥ ಮಾಡಿಕೊಂಡೆ.'

ಅಂತ್ಯದಲ್ಲಿ ಅವನು ಹೀಗೆ ಯೋಚಿಸಿದನು–ಬಹುಶಃ ಈ ಕಾರ್ಯವನ್ನು ಭಗವಂತನೇ ಮಾಡಿದ್ದಾನೆ. ಪ್ರೇಮ ಪೂರ್ವಕವಾಗಿಯೇ ರೋಷಾವೇಶವನ್ನು ತೋರಿಸುತ್ತಾ ಅವನು ಭಗವಂತನಿಗೆ ಹೇಳಿದನು–''ಪ್ರಭು ! ಆ ಆಯುಧಗಳನ್ನು

ಮಾಯೆಯಿಂದ ತೆಗೆದುಕೊಳ್ಳಲೇಬೇಕಾಗಿದ್ದ ಪಕ್ಷದಲ್ಲಿ ನೀನು ಕೊಡುವ ನಟನೆಯನ್ನು ಏಕೆ ಮಾಡಿದೆ?' ಭಗವಂತನು ಹೇಳಿದನು–'ಪ್ರಿಯವರ ಪ್ರವೀರ ! ನಾನು ಅಸ್ತ್ರಗಳನ್ನು ತೆಗೆದುಕೊಂಡಿಲ್ಲ, ನಾನೇ ಅವುಗಳನ್ನು ತೆಗೆದುಕೊಳ್ಳುವುದಾಗಿದ್ದರೆ, ನಾನು ಕೊಡುವುದು ತಾನೇ ಏಕೆ?' ಪ್ರವೀರನು ಕೂಡಲೇ ಹೇಳಿಬಿಟ್ಟನು–'ಪ್ರಭು ! ಹಾಗಿದ್ದರೆ ನೀನು ಅರ್ಜುನನಿಗೆ ಸಹಾಯ ಮಾಡುವುದು ಉಚಿತವಲ್ಲ, ನಾನೂ ಸಹ ನಿನ್ನನ್ನು ನನ್ನ ಪ್ರಾಣಕ್ಕಿಂತ ಹೆಚ್ಚೆಂದು ಭಾವಿಸುತ್ತೇನೆ, ನಿನ್ನ ಚರಣಗಳಲ್ಲಿ ನನ್ನ ಪ್ರೇಮವೇನೂ ಕಡಿಮೆಯಾಗಿಲ್ಲ.'

ಪ್ರವೀರನ ಮಾತುಗಳನ್ನು ಕೇಳಿದ ಕೂಡಲೇ ಅರ್ಜುನನು ಹೇಳಿದನು–'ಪ್ರಭು! ನಾನು ನಿನ್ನನ್ನು ಯುದ್ಧದಲ್ಲಿ ಸಹಾಯ ಮಾಡಲೆಂದೇ ಕರೆದಿದ್ದೇನೆ. ಪ್ರವೀರನಲ್ಲಿ ಶಕ್ತಿಯಿಲ್ಲದಿದ್ದರೆ ಕುದುರೆಯನ್ನು ಬಿಟ್ಟುಬಿಡಲಿ.' ಪ್ರವೀರನು ರೋಷದಿಂದ ಉತ್ತರವಿತ್ತನು–'ಕುದುರೆಯನ್ನು ನಾನು ಬಿಡುವುದಕ್ಕಾಗಿ ಹಿಡಿದುಕೊಂಡಿಲ್ಲ.' ಎರಡೂ ಕಡೆಗಳಿಂದಲೂ ಘನಘೋರ ಬಾಣಗಳ ಸುರಿಮಳೆ ಪ್ರಾರಂಭವಾಯಿತು. ಆಕಾಶವು ತೀಕ್ಷ್ಣ ಬಾಣಗಳಿಂದ ಆವರಿಸಲ್ಪಟ್ಟಿತು ಆದರೆ ಅರ್ಜುನನದು ಏನೂ ನಡೆಯಲಿಲ್ಲ. ಅವನು ಸೋಲುವ ಸ್ಥಿತಿ ಬಂತು.

ಭಗವಂತನು ಹೇಳಿದನು–'ಅರ್ಜುನ ! ಪ್ರವೀರನ ಪ್ರಭಾವವನ್ನು ನೋಡು. ನಾನು ಸಹಾಯ ಮಾಡಿದರೂ ಸಹ ಅವನು ನಿನ್ನನ್ನು ಸೋಲಿಸುತ್ತಿದ್ದಾನೆ.' ಸತತವಾಗಿ ಬಾಣಗಳ ಮಳೆಯನ್ನು ಸುರಿಸುತ್ತಾ ಅರ್ಜುನನು ಉತ್ತರವಿತ್ತನು 'ಪ್ರಭು ! ಆದುದರಿಂದಲೇ ನಾನು ನಿನ್ನನ್ನು ಬರಮಾಡಿಕೊಂಡಿದ್ದೇನೆ. ಈಗ ನಾನು ನಿನ್ನ ಕೃಪೆಯಿಂದ ಇವನನ್ನು ಕೂಡಲೇ ಪರಾಭವಗೊಳಿಸಿ ಬಿಡುತ್ತೇನೆ.'

ಅರ್ಜುನನು ತನ್ನ ಬಹು ತೀಕ್ಷ್ಣವಾದ ಬಾಣವನ್ನು ಬಿಟ್ಟನು, ಆದರೆ ಪ್ರವೀರನು ಅವುಗಳನ್ನು ಮಧ್ಯಯದಲ್ಲಿಯೇ ಖಂಡ ತುಂಡಾಗಿಸಿದನು. ಅರ್ಜುನನು ಕೋಪ ದಿಂದ ಯಾವುದೇ ಅಸ್ತ್ರವನ್ನು ಪ್ರಯೋಗಿಸಿದರೂ ಪ್ರವೀರನು ಅದನ್ನು ನಿಷ್ಕ್ರಿಯ ಗೊಳಿಸುತ್ತಿದ್ದನು, ಆದರೆ ಕೊನೆಗೆ ಆ ದಿನ ಅರ್ಜುನನು ಪ್ರವೀರನನ್ನು ಸೋಲಿಸಿದನು.

ಪ್ರವೀರನು ರೋಷದಿಂದ ಹೇಳಿದನು–'ಅರ್ಜುನ ! ಇದು ನಿನ್ನ ವಿಜಯವಲ್ಲ, ಪ್ರಭುವಿನ ವಿಜಯವೆಂದು ಭಾವಿಸುತ್ತೇನೆ. ಪ್ರಭುವನ್ನು ಜೊತೆಗಿಟ್ಟುಕೊಳ್ಳದೆ ನೀನು ನನ್ನನ್ನು ಪರಾಭವಗೊಳಿಸಿದರೆ ನಾನು ನಿನ್ನನ್ನು ವೀರನೆಂದು ತಿಳಿಯುವೆನು. ಅರ್ಜುನ ಹೇಳಿದನು–'ನಾನು ಭಗವಂತನನ್ನು ಕರೆದಿರುವಾಗ ಆತನನ್ನು ಏಕೆ ಬಿಡುವೆನು. ನಿನಗೆ ಯುದ್ಧಮಾಡಲು ಆಗದಿದ್ದರೆ ಹಿಂದಿರುಗಿ ಹೊರಟುಹೋಗು.'

ಅರ್ಜುನನ ಈ ಮಾತನ್ನು ಕೇಳಿದ ಕೂಡಲೇ ಭಕ್ತಪ್ರವೀರನು ಹೇಳಿದನು– 'ಮಹಾಸ್ವಾಮಿ ! ನೀನು ಎಲ್ಲರಿಗಾಗಿ ಇರುವೆ, ಭೂಮಿಯಲ್ಲಿ ಈ ಪಕ್ಷಪಾತ ಹೇಗೆ? ಆ ಕ್ಷಣ ಅವನು ಪ್ರಭುವಿನ ವಿಶ್ವಮೋಹಿನಿ ಮುಗುಳು ನಗೆಯನ್ನು ನೋಡಿದನು. ಮತ್ತೇನು, ಆತನು ಸಂತುಷ್ಟನಾಗಿರುವುದನ್ನು ಕಂಡು ಪ್ರವೀರನು ಅರ್ಜುನನ ರಥದಿಂದ ಎಳೆದು ಆತನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ಭಗವಂತನು ಲಗಾಮನ್ನು ತೆಗೆದುಕೊಂಡನು. ಅತ್ಯಂತ ಗರ್ವದಿಂದ ಪ್ರವೀರನು ಹೇಳಿದನು– 'ಅರ್ಜುನ ! ಈಗ ಮನಸ್ಸಿಗೆ ತೃಪ್ತಿಯಾಗುವಷ್ಟು ಯುದ್ಧಮಾಡು ಈಗ ನೀನು ಪ್ರಾಣ ಉಳಿಸಿಕೊಂಡು ಓಡಬೇಕಾಗುವುದು, ಇಲ್ಲವೇ ಶಾಶ್ವತವಾಗಿ ಇಲ್ಲಿಯೇ ರಣಭೂಮಿ ಯಲ್ಲಿ ಮಲಗಿಕೊಳ್ಳಬೇಕಾಗಿದೆ.'

ಪ್ರವೀರನಿಗೆ ಯಾವ ಉತ್ತರವನ್ನೂ ಕೊಡದೆ ಅರ್ಜುನನು ಭಗವಂತನೊಡನೆ ಹೇಳಿದನು–'ಪರಮಾತ್ಮ ! ನಾನು ನೀನಿಲ್ಲದೆ ಜೀವಿಸಲಾರೆ. ನೀನು ನನ್ನ ರಥದ ಮೇಲಕ್ಕೆ ಬಂದುಬಿಡು. ನಿನ್ನನ್ನು ನಾನು ಕರೆದಿದ್ದೆನು.' ಇದರ ನಂತರ ಭಗವಂತನು ಅರ್ಜುನನ ರಥದ ಮೇಲಕ್ಕೆ ಬಂದು ಕುದುರೆಗಳ ಲಗಾಮನ್ನು ಹಿಡಿದು ನಿರ್ವಹಿಸಿದನು.

ಉದಾಸೀನನಾಗಿ ಪ್ರವೀರನು ಹೇಳಿದನು–'ಪ್ರಭೂ! ಕಡೇ ಪಕ್ಷ ಒಂದು ಯುದ್ಧದಲ್ಲಿಯಾದರೂ ನೀನು ನನ್ನ ಸಾರಥಿಯಾಗಿದ್ದರೆ !' ಪುನಃ ಅವನು ಅರ್ಜುನನೊಡನೆ ಹೇಳಿದನು–'ಈ ದಿವಸ ನಾನು ನಿನ್ನ ಪೌರುಷವನ್ನು ನೋಡುವೆನು.'

ಅರ್ಜುನನು ಬಹಳ ಎಚ್ಚರಿಕೆಯಿದ ತನ್ನ ತೀಕ್ಷ್ಣ ಬಾಣಗಳ ಮಳೆಗರೆದನು. ಆದರೆ ಪ್ರವೀರನು ಸಾಧಾರಣ ವೀರನಾಗಿರಲಿಲ. ಅವನ ಮುಂದೆ ಅರ್ಜುನನಿಗೆ ಬಹಳ ಗಾಬರಿಯಾಗಿತ್ತು. ಈ ಮಧ್ಯೆ ಭಗವಂತನು ಹೇಳಿಬಿಟ್ಟನು–'ನನ್ನ ಸಹಾಯವನ್ನು

ಪಡೆದೂ ಸಹ ನೀನು ವಿಜಯವನ್ನು ಪಡೆಯುತ್ತಾ ಇಲ್ಲ?' ಪ್ರಬಲವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸುತ್ತಾ ಅರ್ಜುನನು ಹೇಳಿದನು–'ಮಹಾಪ್ರಭು ! ಸ್ವಲ್ಪ ಧೈರ್ಯವಾಗಿರಿ, ನಾನು ಇವನನ್ನು ಈಗಲೇ ಸೋಲಿಸಿಬಿಡುತ್ತೇನೆ.'

ಆದರೆ ಅವನು ವಿಫಲನಾದನು. ಬೇರೆ ಅನೇಕ ದಿವ್ಯಾಸ್ತ್ರಗಳ ಪ್ರಯೋಗದಿಂದ ಪ್ರವೀರನು ಪರಾಭವಗೊಂಡನು. ಆದರೆ ಅವನು ಅರ್ಜುನನ್ನು ಗದರಿಸುತ್ತಾ ಹೇಳಿದನು–'ಮತ್ತೊಬ್ಬರ ಬಲದ ಮೇಲೆ ಯುದ್ಧಮಾಡುವವನನ್ನು ಶೂರನೆಂದು ಹೇಳುವುದಿಲ್ಲ. ಭಗವಂತನಿಲ್ಲದೆ ನೀನೇ ನನ್ನನ್ನು ಪರಾಜಯಗೊಳಿಸುವಂತಹ ಸಾಮರ್ಥ್ಯವು ನಿನ್ನಲ್ಲಿ ಲೇಶಮಾತ್ರವೂ ಇಲ್ಲವಲ್ಲ.'

ಪುನಃ ಅವನು ಭಗವಂತನೊಡನೆ ಹೇಳಿದನು–'ಪ್ರಭು ! ನೀನು ನಮ್ಮಿಬ್ಬರಿಗೂ ಇರುವೆ. ಈಗ ನೀನು ಅರ್ಜುನನ ರಥ ನಡೆಸುವುದನ್ನು ಬಿಟ್ಟು ನಿಃಪಕ್ಷಭಾವದಿಂದ ನಮ್ಮಿಬ್ಬರ ಯುದ್ಧ ಕೌಶಲ್ಯವನ್ನು ನೋಡು, ಆಗ ನಿನಗೇ ಗೊತ್ತಾಗುವುದು ವಸ್ತುತಃ ವೀರ–ಯೋಧನು ಯಾರು ಎಂಬುದು ಮತ್ತು ಇಂದು ಅರ್ಜುನನೂ ಸಹ ಸಮರದ ರುಚಿಯನ್ನು ಸವಿಯಬಹುದು.'

ಭಗವಂತನು ನಗುತ್ತಿದ್ದನು. ಭಕ್ತವರ ಪ್ರವೀರನು ಭಗವಂತನು ಸಂತುಷ್ಟನಾಗಿರುವನೆಂಬುದನ್ನು ತಿಳಿದುಕೊಂಡು ಪುನಃ ಆತನನ್ನು ಅರ್ಜುನನ ರಥದಿಂದ ಎಳೆದುಕೊಂಡು ಹತ್ತಿರದಲ್ಲಿದ್ದ ತಾಡ ವೃಕ್ಷಕ್ಕೆ ಬಂಧಿಸಿದನು. ಮತ್ತೆ ಅವನು ಅರ್ಜುನನಿಗೆ ಹೇಳಿದನು–'ಅರ್ಜುನಾ! ಈಗ ನೀನು ನಿನ್ನ ಪೌರುಷದ ಪರಿಚಯ ಮಾಡಿಕೊಡು. ಈಗ ನಾನು ನಿನಗೆ ಯುದ್ಧ ಮಾಡುವುದರ ಪರಿಣಾಮವನ್ನು ತೋರಿಸುತ್ತೇನೆ.' ಆದರೆ ಅರ್ಜುನನು ಕರುಣಾಪೂರ್ಣ ನೇತ್ರಗಳಿಂದ ಭಗವಂತನ ಕಡೆಗೆ ನೋಡಿ ಹೇಳಿದನು–'ಪ್ರಭೂ! ನಾನು ನಿನ್ನನ್ನು ಇದಕ್ಕಾಗಿಯೇ ಕರೆದಿದ್ದೇನೇ? ಕೌರವರ ಸಭೆಯಲ್ಲಿ ಮಹಾಬಲಶಾಲೀ ಯೋಧರೂ ಕೂಡ ನಿನ್ನನ್ನು ಕಟ್ಟಿಹಾಕ ಲಾಗಲಿಲ್ಲ. ಇಲ್ಲಿ ನೀನು ಹೇಗೆ ಬಂಧಿತನಾದೆ. ನನಗೆ ಗಾಬರಿಯಾಗುತ್ತಿದೆ, ಹೇ ದೇವ ! ನೀನು ಬೇಗ ಬಂದು ನನ್ನ ರಥದ ಕಡಿವಾಣವನ್ನು ನಿರ್ವಹಿಸು.' ಯಾರ ಒಂದು ನಾಮದಿಂದ ಎಲ್ಲಾ ಬಂಧನಗಳೂ ಬಿಡುಗಡೆಯಾಗಿ ಹೋಗುತ್ತವೆಯೋ, ಆ ಅಚಿಂತ್ಯಶಕ್ತಿ ಭಗವಂತನು ಇಂದು ತನ್ನ ಪ್ರೇಮೀ ಭಕ್ತನ ಪ್ರೇಮಪಾಶದಿಂದ ಬಂಧಿ

ತನಾಗಿದ್ದಾನೆ. ಆದರೆ ಮತ್ತೊಂದು ಕಡೆಯೂ ಅದೇ ರೀತಿಯ ಭಕ್ತನಿದ್ದಾನೆ. ಅವನ ದೀನ ವಾಣಿಯೂ ಸಹ ಪರಮಾತ್ಮನನ್ನು ಆಕರ್ಷಿಸುತ್ತಿದೆ. ಪರಮಾತ್ಮನು ಅರ್ಜುನನ ದೀನವಾಣಿಯನ್ನು ಕೇಳಿದ ಕೂಡಲೇ ಹಗ್ಗವನ್ನು ಕಿತ್ತೊಗೆದು ಅವನ ರಥದ ಮೇಲೆ ಬಂದು ಕುಳಿತನು ಮತ್ತು ರಥವನ್ನು ನಡೆಸಿದನು. ಭಗವಂತನದು ಇಂದು ವಿಚಿತ್ರ ಸ್ಥಿತಿಯಾಯಿತು. ಅವನು ಪ್ರೇಮೀ ಭಕ್ತರ ಜಗ್ಗಾಟ ತಿಕ್ಕಾಟದಲ್ಲಿ ಪ್ರೇಮಮಯನಾಗಿ ಆಶ್ಚರ್ಯಮಯೀ ಕ್ರೀಡೆ ನಡೆಸುತ್ತಿದ್ದಾನೆ.

ಪ್ರವೀರನಿಂದ ಸುಮ್ಮನಿರಲಾಗಲಿಲ್ಲ, ಅವನು ಪುನಃ ಭಗವಂತನಿಗೆ ಹೇಳಿದನು–'ಪ್ರಭು! ಬಹಳ ಆಶ್ಚರ್ಯವಾಗಿದೆ, ಒಂದರೆಕ್ಷಣವಾದರೂ ತಟಸ್ಥನಾಗಿದ್ದು ನೀನು ಇಬ್ಬರು ಭಕ್ತರ ಯುದ್ಧ ಮತ್ತು ಶೌರ್ಯವನ್ನಾದರೂ ನೋಡಿದ್ದರೆ ಚೆನ್ನಾಗಿತ್ತು. ಆದರೆ ನಿನ್ನ ಇಚ್ಛೆಯಂತಾಗಲಿ!' ಅವನು ಪುನಃ ಅರ್ಜುನನ್ನು ಸಂಬೋಧಿಸುತ್ತಾ 'ಶೌರ್ಯವೆಂಬ ಯಾವ ವಸ್ತುವೂ ನಿನ್ನಲಿಲ್ಲ. ಮತ್ತೊಬ್ಬರ ಸಹಾಯದಿಂದ ವೀರರನ್ನು ಪರಾಜಿತರನ್ನಾಗಿ ಮಾಡುವ ಪ್ರಯತ್ನವು ಸಮರಾಂಗಣದಲ್ಲಿ ಶೋಭಾಯಮಾನ ವಾದುದಲ್ಲ.' ಎಂದು ಹೇಳಿ ಅವನು ರೋಷದಿಂದ ಬಹು ತೀಕ್ಷ್ಣವಾದ ಬಾಣಗಳನ್ನು ಮತ್ತು ದಿವ್ಯಾಯುಧಗಳ ಮಳೆಗರೆದನು; ಅದರಿಂದ ಅರ್ಜುನನು ಗಾಬರಿ ಗೊಳಗಾದನು ಮತ್ತು ಅವನ ಸೈನ್ಯವೆಲ್ಲಾ ಗಾಯಗಳಿಂದ ಜರ್ಜರಿತವಾಗಿ ಚೆಲಾಪಿಲ್ಲಿಯಾಗಿ ಹೋಯಿತು. ಅಲ್ಲಿಯೂ ಭಗವಂತನ ಲೀಲೆಯೇ ಕಾರ್ಯ ಮಾಡುತ್ತಿತ್ತು.

ಇದರಿಂದ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾ ಶ್ರೀಕೃಷ್ಣಪರಮಾತ್ಮನು ಹೇಳಿದನು– 'ಕೇವಲ ಪ್ರವೀರನೊಬ್ಬನ ಸಮ್ಮುಖದಲ್ಲಿಯೇ ನಿನಗೆ ಈ ಸ್ಥಿತಿಯಾಗಿರುವಾಗ, ನೀನು ಬೇರೆ ಯೋಧರುಗಳ ಮುಂದೆ ಏನು ಮಾಡಬಲ್ಲೆ?' ಅರ್ಜುನನು ತಕ್ಷಣ ಓಡುತ್ತಿರುವ ತನ್ನ ಸೈನ್ಯಕ್ಕೆ ಕ್ಷತ್ರಿಯರ ವೀರಗತಿ ಅವರ ಮರ್ಯಾದೆಯ ಬಗೆಗೆ ಗಮನ ಸೆಳೆದು ಯುದ್ಧಕ್ಕೆ ಪ್ರೋತ್ಸಾಹಿಸಿದನು. ವಿಶಾಲ ಸೇನೆಯು ಪುನಃ ಪೂರ್ಣ ಸಾಮರ್ಥ್ಯದಿಂದ ಪ್ರವೀರನ ಸೈನ್ಯದೊಡನೆ ಹೋರಾಡಿತು. ಅರ್ಜುನನೂ ಸಹ ತನ್ನ ಬಾಣಗಳ ಅಪೂರ್ವ ಸುರಿಮಳೆಯಲ್ಲಿ ನಿರತನಾದನು. ಎರಡೂ ಪಕ್ಷಗಳೂ

ತಮ್ಮ ವಿಜಯಕ್ಕಾಗಿ ಶಕ್ತಿ ಪ್ರಯೋಗ ಮಾಡುತ್ತಿದ್ದವು. ಈ ಪ್ರಕಾರ ನಡೆಯುತ್ತಾ ನಡೆಯುತ್ತಾ ಕಡೆಗೆ ಈ ದಿವಸ ಪ್ರವೀರನು ಸೋತು ಹೋದನು ಮತ್ತು ಅರ್ಜುನನಿಗೆ ವಿಜಯವಾಯಿತು.

ಆದರೆ ವೀರ ಪ್ರವೀರನಿಗೆ ಕಿಂಚಿತ್ತಾದರೂ ಚಿಂತೆಯಿರಲಿಲ್ಲ. ಅವನು ಪುನಃ ಅರ್ಜುನನ್ನು ಬೆದರಿಸಿದನು–'ಅರ್ಜುನಾ! ನೀನು ನಿಜವಾದ ಶೌರ್ಯವನ್ನು ಪಡೆದುಕೋ. ಶ್ರೀಕೃಷ್ಣನಿಗೆ ನೀನೇ ಯುದ್ಧ ಮಾಡದೆ ನಿನಗೆ ಪ್ರಾಣ ರಕ್ಷಣೆ ಮಾಡಿಕೊಳ್ಳಲೂ ಸಹ ಕಷ್ಟವಾಗುವುದು.' ಪುನಃ ಅವನು ಭಗವಂತನೊಡನೆ ಹೇಳಿದನು–'ಮಹಾಸ್ವಾಮಿ ! ನಾನು ಸಹ ನಿನ್ನ ಭಕ್ತ. ಆದರೆ ಈ ದಿನ ನೀನು ಇದುವರೆಗೂ ಅರ್ಜುನನಲ್ಲಿ ಮತ್ತು ನನ್ನಲ್ಲಿ ವ್ಯತ್ಯಾಸವನ್ನು ತಿಳಿಯುತ್ತಿರುವೆ. ಹಾಗೇಕೆ, ಮಾಡುವೆ, ನಾಥ ! ನನಗೆ ನಿನ್ನ ಭರವಸೆ ತುಂಬಾ ಇದೆ.'

ಭಗವಂತನು ನಕ್ಕುಬಿಟ್ಟನು. ಪ್ರವೀರನು ಆತನನ್ನು ತನಗೆ ಅನುಕೂಲನೆಂದು ತಿಳಿದುಕೊಂಡು ತಕ್ಷಣ ಎಳೆದುಕೊಂಡನು ಮತ್ತು ಹತ್ತಿರವೇ ಇದ್ದ ತಾಡ ವೃಕ್ಷಕ್ಕೆ ಪುನಃ ಬಿಗಿದು ಬಂಧಿಸುತ್ತಾ ಹೇಳಿದನು–'ಪ್ರಭೂ! ಈ ಸಲ ಯಾರ ಪಕ್ಷವನ್ನೂ ವಹಿಸದೆ ನಿಷ್ಪಕ್ಷಭಾವದಿಂದ ಯುದ್ಧವನ್ನು ನೋಡುವೆನೆಂದು ಪ್ರತಿಜ್ಞೆ ಮಾಡು.' ಪ್ರಭು ನಗುತ್ತಾ ಮೌನದ ಸಮ್ಮತಿಯಿತ್ತನು.

ಪ್ರವೀರನು ಕೂಡಲೇ ನೆಗೆದು ತನ್ನ ರಥವನ್ನೇರಿದನು ಮತ್ತು ಶರಸಂಧಾನ ಮಾಡುತ್ತಾ ಹೇಳಿದನು–'ಪಾರ್ಥ! ಈಗ ನೀನು ಪ್ರಾಣ ಉಳಿಸಿಕೊಂಡು ಓಡಬೇಕು ಅಥವಾ ಇಲ್ಲಿಯೇ ಶಾಶ್ವತವಾಗಿ ಮಲಗಿಕೊಳ್ಳಲು ಸಿದ್ಧನಾಗು.' ಪ್ರಭು ಪ್ರತಿಜ್ಞೆ ಬದ್ಧನಾಗಿ ಬಿಟ್ಟಿದ್ದಾನೆ. ಪ್ರಭು ಬಂಧಿಸಲ್ಪಟ್ಟು ನಗುತ್ತಾ ಇದ್ದನು. ಇಂದು ಆತನಿಗೆ ತನ್ನ ಈ ಅಸಹಾಯಕತೆಯಲ್ಲಿಯೂ ಆನಂದ ದೊರೆಯುತ್ತಿತ್ತು.

ಅರ್ಜುನನು ಪ್ರಭುವಿನ ಕಡೆಗೆ ನೋಡುತ್ತಾ ಇದ್ದನು. ಅವನು ಹೇಳಿದನು– 'ಹೇ ದೇವ ! ಇದೇನು ಲೀಲೆ ಮಾಡುತ್ತಿರುವೆ. ನನ್ನ ಪ್ರಾಣಕ್ಕೆ ಕಂಟಕ ಬಂದು ಬಿಟ್ಟಿದೆ. ಈಗ ನಾನು ಗಾಬರಿಗೊಳಗಾಗಿದ್ದೇನೆ. ಕೌರವರ–ಯುದ್ಧದಲ್ಲಿ ನೀನು ನನ್ನ ರಕ್ಷಣೆಗಾಗಿ ಶಸ್ತ್ರಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆ. ಆದರೆ ಭಕ್ತನಿಗಾಗಿ

ಅದನ್ನು ಮುರಿದು ಬಿಟ್ಟೆ, ಅದೇ ನಿನ್ನ ಪ್ರಾಣ ಪ್ರಿಯ ಅರ್ಜುನ ಸಾಯಲು ಇಚ್ಛಿಸುತ್ತಾನೆ, ಆದುದರಿಂದ ಈಗ ಪುನಃ ಪ್ರತಿಜ್ಞೆ ಭಂಗ ಮಾಡು ಮತ್ತು ಬೇಗ ಬಂದು ನನ್ನ ರಕ್ಷಣೆ ಮಾಡು. ಭಗವಂತನು ತಕ್ಷಣ ಅರ್ಜುನನ ರಥದ ಮೇಲೆ ಪ್ರತ್ಯಕ್ಷನಾದನು. ಆತನು ಹಾಗೆಯೇ ನಗುತ್ತಿದ್ದನು.

ಪ್ರವೀರನು ವ್ಯಾಕುಲತೆಯಿಂದ ಹೇಳಿದನು–'ಪ್ರಭು ! ಇದೇನು ನೀನು ನಿನ್ನ ಪ್ರತಿಜ್ಞೆಯನ್ನು ಉಲ್ಲಂಘಿಸಿಬಿಟ್ಟೆಯಾ.' ಭಗವಂತನು ಕೂಡಲೇ ಹೇಳಿದನು– 'ನಾನೇನೂ ಯಾವ ಪ್ರತಿಜ್ಞೆಯನೂ ಮಾಡಿರಲಿಲ್ಲ.'

ಭಕ್ತ ಪ್ರವೀರನು ಪ್ರೀತಿ–ವಿಶ್ವಾಸದ ರೋಷದಿಂದ ಹೇಳಿದನು–'ಪ್ರಭು! ನೀನು ಅಸತ್ಯವನ್ನು ನುಡಿದರೆ ಪ್ರಪಂಚದ ಗತಿಯೇನಾಗಬಹುದು. ನಾನು ಸುಮ್ಮನಿದ್ದು ಕೊಂಡು ಯುದ್ಧವನ್ನು ನೋಡುವೆನೆಂದು ನೀನು ಪ್ರತಿಜ್ಞೆಮಾಡಿದ್ದೆ. ಆದರೆ ನೀನು ಪುನಃ ಬಂದು ಅರ್ಜುನನ ರಥದ ಮೇಲೆ ಕುಳಿತುಕೊಂಡೆ.'

ಪರಮಾತ್ಮ ಹೇಳಿದನು–'ಯಾರು ಪ್ರತಿಜ್ಞೆಮಾಡಿದ್ದನೋ, ಅವನನ್ನು ಕೇಳಪ್ಪಾ! ಪ್ರವೀರನು ತಾಡವೃಕ್ಷದ ಕಡೆಗೆ ನೋಡಿದರೆ ಭಗವಂತನು ಅಲ್ಲಿಯೇ ಬಂಧಿ ಸಲ್ಪಟ್ಟು ನಿಂತಿದ್ದನು. ಅವನ ಒಮ್ಮೆ ತಾಡವೃಕ್ಷದ ಕಡೆಗೂ ಮತ್ತೊಮ್ಮೆ ಅರ್ಜುನನ ರಥದ ಕಡೆಗೂ ನೋಡಿದನು. ಈಗ ಒಬ್ಬನೇ ಭಗವಂತನ ಎರಡು ರೂಪಗಳುಂಟಾಗಿದ್ದವು. ಪ್ರವೀರನು ಅರ್ಜುನನಿಗೆ ಹೇಳಿದನು–'ಅರ್ಜುನ ! ನೀನು ಮಹಾ ಧನ್ಯನಾದೆ ಮತ್ತು ನಿನ್ನ ಮಾತಾಪಿತೃಗಳೂ ಧನ್ಯರಾದರು. ಏಕೆಂದರೆ, ನಿಮಗಾಗಿ ಭಗವಂತನು ಎರಡು ರೂಪಗಳನ್ನು ಧರಿಸಬೇಕಾಯಿತು.'

ಅನಂತರ ಪ್ರವೀರನು ತಾಡವೃಕ್ಷದಲ್ಲಿ ಬಂಧಿಸಲ್ಪಟ್ಟಿರುವ ಭಗವಂತನನ್ನು ನೋಡುತ್ತಿದ್ದನು. ಅವನ ಹೃದಯದಲ್ಲಿ ಹುದುಗಿದ್ದ ಪ್ರೇಮಾಂಬುಧಿಯು ಪ್ರಕಟ ಗೊಂಡು ಉಕ್ಕಿಬಂತು. ಅವನು ತನ್ನನ್ನು ತಾನೇ ಮರೆತುಬಿಟ್ಟನು. ಭಗವಂತನ ನಿತ್ಯ–ನವ – ನವೀನ, ಸುರ–ಮುನಿ–ಮನಮೋಹಿನೀ ರೂಪ ಮಾಧುರ್ಯವು ಎಂತಹ ಅದ್ಭುತ ಮೋಡಿ ಮಾಡಿತೆಂದರೆ– ಪ್ರವೀರನ ಬಾಹ್ಯ ಜ್ಞಾನ ಸಂಪೂರ್ಣವಾಗಿ ಲೋಪವಾಗಿ ಹೋಯಿತು. ಅವನು ಆ ಅಲೌಕಿಕ ರೂಪಸುಧಾ ಸಾಗರದಲ್ಲಿ ಮುಳುಗಿಹೋದನು.

ಅದೇ ಸಮಯದಲ್ಲಿ ಭಗವಂತನು ಅರ್ಜುನನಿಗೆ ಹೇಳಿದನು–'ಪಾರ್ಥ! ನೀನು ಬಹು ಶೀಘ್ರವಾಗಿ ಪ್ರವೀರನ ತಲೆಯನ್ನು ತೆಗೆದು ಬಿಡು' ಅರ್ಜುನ ಹೇಳಿದನು–'ಪ್ರಭೂ! ಪ್ರವೀರನು ಯುದ್ಧವನ್ನು ಬಿಟ್ಟು ನಿನ್ನ ಧ್ಯಾನದಲ್ಲಿ ತಲ್ಲೀನ ನಾಗಿದ್ದಾನೆ, ಇಂತಹ ಸ್ಥಿತಿಯಲ್ಲಿ ಇವನನ್ನು ಕೊಲ್ಲುವುದು ಧರ್ಮವಿರುದ್ಧವಲ್ಲವೆ.' ಭಗವಂತ ಕೂಡಲೇ ಹೇಳಿಬಿಟ್ಟನು–'ಅರ್ಜುನಾ ! ನನ್ನ ಭಕ್ತ ಪ್ರವೀರನನ್ನು ಯುದ್ಧದಲ್ಲಿ ಎದುರಿಗೆ ಕೊಲ್ಲುವಂತಹ ಸಾಮರ್ಥ್ಯ ಯಾರಲ್ಲಿದೆ? ನನ್ನ ಭಕ್ತ ನನ್ನ ಧ್ಯಾನದಲ್ಲಿ ಮಗ್ನನಾಗಿರುತ್ತಿರುವಾಗಲೇ ನನ್ನ ಪರಮಧಾಮಕ್ಕೆ ಸೇರಬೇಕೆಂಬುದೇ ನನ್ನ ಇಚ್ಛೆಯಾಗಿದೆ. ನನ್ನ ಆಜ್ಞೆ, ನೀನು ಇವನನ್ನು ಕೊಲ್ಲು, ನಿನಗೆ ಪಾಪ ತಟ್ಟದು.

ಅರ್ಜುನನು ಒಂದು ತೀಕ್ಷ್ಣವಾದ ಅರ್ಧಚಂದ್ರಾಕೃತಿಯ ಬಾಣವನ್ನು ಬಿಟ್ಟನು, ಅದರಿಂದ ಪ್ರವೀರನ ತಲೆ ಕತ್ತರಿಸಲ್ಪಟ್ಟು ಪುಟಿಯಿತು ಮತ್ತು ಭಗವಂತನ ಚರಣಗಳ ಮೇಲೆ ಹೋಗಿ ಬಿದ್ದಿತು. ಅದರಿಂದ ಒಂದು ಪರಮ ನಿರ್ಮಲ ಜ್ಯೋತಿ ಹೊರಟು, ಅದು ಶ್ರೀ ಭಗವಂತನ ಮಂಗಳಮಯ ಶ್ರೀ ವಿಗ್ರಹದಲ್ಲಿ ಲೀನಗೊಂಡಿತು. ಪ್ರವೀರನ ದೇಹಾಂತ್ಯವಾದ ಕೂಡಲೇ ಅವನ ಉಳಿದ ಸೈನ್ಯ ಓಡಿಹೋಯಿತು. ಮಾಹಿಷ್ಮತಿಯಲ್ಲಿ ಶೋಕ ಆವರಿಸಲ್ಪಟ್ಟಿತು.

ಪ್ರವೀರನ ಮೃತ್ಯು ಸಮಾಚಾರವನ್ನು ಕೇಳಿ ಅವನ ತಂದೆ ಪ್ರಲಾಪಿಸುತ್ತಾ ಇದ್ದರು. ಪುತ್ರ ಶೋಕದಿಂದ ಅಳುತ್ತಾ ಪುತ್ರನ ವೀರಗತಿ ಹಾಗೂ ಭಕ್ತಗತಿಯಿಂದ ಗರ್ವಿತಳಾದ ಅವನ ತಾಯಿ ಹೇಳಿದಳು–'ಮಗೂ! ನೀನು ಅರ್ಜುನನ ಬಾಣದಿಂದ ಹತನಾಗಿ ಪರಮಾತ್ಮನ ಸನ್ನಿಧಿಗೆ ಹೋದೆ ಮತ್ತು ನಾನು ವೀರ ಕ್ಷತ್ರಿಯ ಕುಮಾರನ ತಾಯಿ ಎಂಬುದು ನಿಶ್ಚಿತವಾಯಿತು. ನನ್ನ ಜನ್ಮ ಸಫಲವಾಯಿತು.

ಈ ಮಧ್ಯೆ ಭಗವಂತನು ಅಲ್ಲಿಗೆ ಬಂದನು. ಆತನು ಅಳುತ್ತಿದ್ದ ಜುಹ್ನಾದೇವಿಗೇ ಹೇಳಿದನು–'ನೀನೇನು ಚಿಂತಿಸಬೇಡ, ಹೇಳಿದರೆ ಪ್ರವೀರನನ್ನ ಪುನಃ ಜೀವಂತವಾಗಿ ಮಾಡಿಕೊಡುವೆನು.' ಜುಹ್ನಾದೇವಿಯು ಹೇಳಿದಳು–'ಪ್ರಭೂ! ನಿನ್ನ ಸಮ್ಮುಖದಲ್ಲಿ ಮೃತ್ಯು ಪಡೆದು ಪುನಃ ಜೀವಂತವಾಗಲು ಯಾರು ಬಯಸುವರು, ಆದರೆ ನೀನು ಯಾವ ಗತಿಯನ್ನು ನಮ್ಮ ಪುತ್ರನಿಗೆ ಕೊಟ್ಟಿರುವಿಯೋ ಅದೇ ಗತಿಯು ದಂಪತಿಗಳಾದ ನಮಗೂ ಪ್ರಾಪ್ತಿಯಾಗಲಿ ಎಂದು ನಾನು ಬಯಸುತ್ತೇನೆ.'

ಭಗವಂತನು ತಥಾಸ್ತು ಎನ್ನುತ್ತಾ ಹೇಳಿದನು–'ಈಗ ಮಹಾರಾಜ ನೀಲಧ್ವಜನು ಅರ್ಜುನನನ್ನು ಪ್ರೀತಿಪೂರ್ವಕವಾಗಿ ಬೀಳ್ಕೊಡಲಿ ಹಾಗೂ ಯುಧಿಷ್ಠಿರ ಮಹಾರಾಜನ ಅಶ್ವಮೇಧ ಯಜ್ಞಕ್ಕೆ ಉಚಿತ ಕಾಣಿಕೆಯೊಡನೆ ಬರಲಿ, ಅಲ್ಲಿ ಪುನಃ ನನ್ನ ದರ್ಶನವಾಗುವುದು.' ಪ್ರಭು ಅಂತರ್ಧಾನನಾದನು.

ಭಗವಂತನ ಆದೇಶದಂತೆ ನೀಲಧ್ವಜನು ಅರ್ಜುನನನ್ನು ಅತ್ಯಂತ ಸತ್ಕಾರ ಪೂರ್ವಕವಾಗಿ ಬೀಳ್ಕೊಟ್ಟನು ಮತ್ತು ಅವರು ಭಗವಂತನ ಭಜನೆಯಲ್ಲಿ ನಿರತರಾದರು. ಪತಿವ್ರತೆಯಾದ ಮದನಮಂಜರಿಯೂ ಸಹ ಪತಿಯೊಡನೆ ಸತಿಯಾಗಿ ಭಗವಂತನ ಪರಮಪದವನ್ನು ಸೇರಿಕೊಂಡಳು.

❑❑❑

# ೭. ಪ್ರಪಂಚ ವಾಟಿಕೆ

**ಕುರಂಗಮಾತಂಗಪತಂಗಭೃಂಗ ಮೀನಾ ಹತಾಃ ಪಂಚಭಿರೇವ ಪಂಚ ।**
**ಏಕಃ ಪ್ರಮಾದೀ ಸ ಕಥಂ ನ ಹನ್ಯತೇ ಯಃ ಸೇವತೇ ಪಂಚಭಿರೇವ ಪಂಚ ॥**

ಜಿಂಕೆ, ಆನೆ, ಪತಂಗ, ದುಂಬಿ ಮತ್ತು ಮೀನು – ಈ ಐದು ಜೀವಿಗಳೂ ಐದು ವಿಷಯಗಳಿಂದ ಒಂದೊಂದರಿಂದ ಕೊಲ್ಲಲ್ಪಡುತ್ತವೆ ಅಂದಮೇಲೆ, ಇಂದ್ರಿಯಗಳಿಂದ ಐದು ವಿಷಯಗಳನ್ನೂ ಉಪಭೋಗಿಸುವ ಪ್ರಮಾದಿಯಾದ ಮನುಷ್ಯನು ಹತನಾಗದೇ ಇರುವನೇ?

ಆದುದರಿಂದ ಮನುಷ್ಯನು ವಿಷಯಗಳಿಂದ ಮನಸ್ಸು–ಇಂದ್ರಿಯಗಳನ್ನು ನಿಗ್ರಹಿಸಿ ಅವುಗಳನ್ನು ಪರಮಾತ್ಮನ ಕಡೆಗೆ ತೊಡಗಿಸುವುದೇ ಉಚಿತವಾದದ್ದು. ಈ ವಿಚಾರದಲ್ಲಿ ಒಂದು ದೃಷ್ಟಾಂತವಿದೆ – ಒಬ್ಬ ಚಕ್ರವರ್ತಿ ಇದ್ದನು. ಯಾವ ಮನುಷ್ಯನಾದರೂ ಸರಿ ನಾಳೆ ನನ್ನ ದರ್ಶನ ಮಾಡುವನೋ ಅವನಿಗೆ ನಾನು ಯುವರಾಜ ಪದವಿಯನ್ನು ಕೊಟ್ಟುಬಿಡುವೆನು ಎಂದು ಘೋಷಣೆ ಮಾಡಿದನು. ನಾನು ನನ್ನ ತೋಟದ ಬಂಗಲೆಯಲ್ಲಿ ವಾಸಿಸುತ್ತಿರುವೆನು. ಅದು ನಾಳೆ ದಿನವೆಲ್ಲಾ ಎಲ್ಲರಿಗಾಗಿ ತೆರೆದಿರುವುದು. ನನ್ನ ಹತ್ತಿರಕ್ಕೆ ಯಾರು ಬೇಕಾದರೂ ಬರಬಹುದು.

ಯಾರಿಗೂ ಸಹ ಯಾವ ಅಡಚಣೆ ಇರುವುದಿಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ತೋಟದಲ್ಲಿ ಅಡ್ಡಾಡಲು ಕೇವಲ ಎರಡು ಘಂಟೆಗಳಿಗಿಂತ ಹೆಚ್ಚು ಕಾಲ ಇರಲಾಗದು. ತೋಟದಲ್ಲಿ ಪ್ರವೇಶಿಸಿದ ನಂತರ ನನ್ನ ಹತ್ತಿರಕ್ಕೆ ಬಂದು ಸೇರಲು ಅರ್ಧ ನಿಮಿಷದ ಸಮಯವೇ ಸಾಕಾಗಿದೆ, ಏಕೆಂದರೆ ಅಲ್ಲಿನ ರಸ್ತೆಗಳು ಬಹಳ ಸುಗಮ ಮತ್ತು ಸುಲಭವಾಗಿವೆ. ಆದುದರಿಂದ ಯಾವ ಮನುಷ್ಯನು ನಿಯಮಿತ ಸಮಯದ ಒಳಗಾಗಿ ನನ್ನ ದರ್ಶನ ಮಾಡಿಕೊಳ್ಳುವನೋ, ಅವನಿಗೆ ಯುವರಾಜ ಪದವಿಯನ್ನು ಕೊಡಲಾಗುವುದು. ಅಲ್ಲದೆ ಯಾರು ತೋಟದಲ್ಲಿಯೇ ಅನುರಕ್ತನಾಗಿ ಆನಂದಪಡುತ್ತಿರುವನೋ, ಅವನನ್ನು ಎರಡು ಘಂಟೆ ಸಮಾಪ್ತಿಯಾದ ಕೂಡಲೇ ಹೊರಕ್ಕೆ ಕಳುಹಿಸಿ ಬಿಡಲಾಗುವುದು.

ಈ ಘೋಷಣೆಯು ರಾಜ್ಯದ ಎಲ್ಲೆಡೆಗಳಲ್ಲಿಯೂ ಪ್ರಚಾರವಾಯಿತು. ಪ್ರಾತಃಕಾಲವಾದ ಕೂಡಲೇ ಜನರೆಲ್ಲಾ ತೋಟಕ್ಕೆ ಧಡ-ಧಡ ಎಂದು ಶಬ್ದ ಮಾಡುತ್ತಾ ಬಂದು ಪ್ರವೇಶಿಸಿಲಾರಂಭಿಸಿದರು. ತೋಟದ ಬಾಗಿಲಿನಲ್ಲಿಯೇ ಪ್ರಬಂಧಕನ ನಿವಾಸ ಸ್ಥಾನವಿತ್ತು. ಆ ವ್ಯವಸ್ಥಾಪಕನು, ಯಾವ ವ್ಯಕ್ತಿಯೇ ಆಗಲಿ ತೋಟದೊಳಗಡೆಗೆ ಪ್ರವೇಶಿಸುವನೋ ಅವನಿಗೆ ಒಂದು ಟಿಕೆಟ್ ಕೊಡುತ್ತಿದ್ದ ಮತ್ತು ಅದರ ಒಂದು ನಕಲನ್ನು ತನ್ನ ಹತ್ತಿರ ಇಟ್ಟುಕೊಳ್ಳುತ್ತಿದ್ದ. ಈ ಪ್ರಕಾರ ಜನರು ಟಿಕೆಟ್ ತೆಗೆದುಕೊಂಡು ಒಳಗಡೆ ಹೋಗಲಾರಂಭಿಸಿದರು. ತೋಟಕ್ಕೆ ಹೋಗಿ ಕೆಲವರು ನಾನಾ ಪ್ರಕಾರದ ಮಲ್ಲಿಗೆ, ತಾಳೆ, ಗುಲಾಬಿ ಹೂಗಳನ್ನು ಮೂಸಿ ನೋಡುತ್ತಾ ಶೀತಲ, ಮಂದ, ಸುಗಂಧಿತ ಗಾಳಿಯಲ್ಲಿ ಅಡ್ಡಾಡುತ್ತಿದ್ದರು. ಎಷ್ಟೋ ಮಂದಿ ಅವರಿಗಿಂತ ಮುಂದೆ ಹೋಗಿ ಮಧುರವಾದ ಹಣ್ಣು ಹಂಪಲುಗಳನ್ನು ಕಿತ್ತುಕೊಂಡು ತಿನ್ನುತ್ತಿದ್ದು, ಇನ್ನು ಕೆಲವರು ಅವರಿಗಿಂತಲೂ ಮುಂದೆ ಹೋಗಿ ಸರ್ಕಸ್, ಸಿನೆಮಾ, ವಿಚಿತ್ರ ವಸ್ತು ಸಂಗ್ರಹಾಲಯ, ಕ್ರೀಡೆಗಳು, ತಮಾಶೆ ಇತ್ಯಾದಿಗಳನ್ನು ಹಾಗೂ ರತ್ನಗಳ ರಾಶಿಗಳನ್ನೂ, ಚಿನ್ನ ಬೆಳ್ಳಿಯ ನಾನಾ ಪ್ರಕಾರದ ನಾಣ್ಯಗಳನ್ನು ಮತ್ತು ಇನ್ನೂ ಅನೇಕ ಪ್ರಕಾರದ ಮೊದಲೆಂದೂ ನೋಡಿರದ ಪದಾರ್ಥಗಳನ್ನು ನೋಡುತ್ತಿದ್ದರು. ಮತ್ತೆಷ್ಟೋ ಜನರು ಅವರಿಗಿಂತಲೂ ಮುಂದೆ ಹೋಗಿ ಗ್ರಾಮಾಫೋನ್-ರೇಡಿಯೋ ಮುಂತಾದವುಗಳ

ಹಾಡನ್ನು ಕೇಳುತ್ತಿದ್ದರು. ಈ ರೀತಿ ಆ ಜನರು ತೋಟದ ಭೋಗ–ವಿಲಾಸಗಳಲ್ಲಿ ಸಿಕ್ಕಿಕೊಂಡು ರಾಜನ ದರ್ಶನದಿಂದ ವಂಚಿತರಾದರು ಮತ್ತು ಅಜ್ಞಾನವಶದಿಂದ, ನಮಗೆ ರಾಜನ ದರ್ಶನ ಇನ್ನೆಲ್ಲಿ ? ಅವರುಗಳಲ್ಲಿ ಯಾರೋ ಒಬ್ಬ ವಿರಕ್ತನಾದ ಪುರುಷನು ತನ್ನ ಮನಸ್ಸು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ಆ ಎಲ್ಲಾ ಭೋಗ–ವಿಲಾಸಗಳನ್ನೂ, ರುಚಿ ಮೋಜು ಇತ್ಯಾದಿಗಳನ್ನು ತಿರಸ್ಕರಿಸಿ ಮಹಾರಾಜನ ಹತ್ತಿರಕ್ಕೆ ಸೇರಿದನು ಮತ್ತು ಅವನಿಗೆ ಮಹಾರಾಜರು ಯುವರಾಜ ಪದವಿಯನ್ನು ಕೊಟ್ಟರು.

ವ್ಯವಸ್ಥಾಪಕನ ಕಡೆಯ ಅನೇಕ ಸಿಪಾಯಿಗಳು ಆ ತೋಟದಲ್ಲಿ ತಿರುಗಾಡುತ್ತಾ ಇದ್ದರು. ಅವರು ಯಾವ ಮನುಷ್ಯನ ಸಮಯ ಮುಗಿದು ಹೋಗಿತ್ತಿದ್ದಿತೋ, ಅವನ ಟಿಕೆಟ್ಟನ್ನು ಹಿಂದಕ್ಕೆ ತೆಗೆದುಕೊಂಡು ಅವನನ್ನು ತೋಟದಿಂದ ಹೊರಕ್ಕೆ ಕಳುಹಿಸಿ ಬಿಡುತ್ತಿದ್ದರು. ಆದರೆ ಕೆಲವರು ಹೂವುಗಳ ಸುಗಂಧವನ್ನು ತೆಗೆದುಕೊಳ್ಳುತ್ತಾ, ಗಾಳಿಸೇವನೆ ಮಾಡುತ್ತಾ ಇನ್ನೂ ಸ್ವಲ್ಪಹೊತ್ತು ನಮ್ಮನ್ನು ಇಲ್ಲಿರಲು ಬಿಡು ಎಂದು ಹೇಳುವರು. ಆದರೆ ಸಿಪಾಯಿಗಳನ್ನು ನೇಮಕ ಮಾಡಲಾಗಿತ್ತು. ಯಾರೂ ಸಹ ಒಂದು ನಿಮಿಷ ಕೂಡ ಹೆಚ್ಚಾಗಿರಲು ಹೇಗೆ ತಾನೇ ಸಾಧ್ಯವಾಗುತ್ತಿತ್ತು. ಸಿಪಾಯಿಗಳು ಹೊಡೆದು ಬಲಪೂರ್ವಕವಾಗಿ ಹೊರಕ್ಕೆ ಕಳುಹಿಸುತ್ತಿದ್ದರು. ಹಣ್ಣು ಹಂಪಲುಗಳನ್ನು ಕಿತ್ತು ತಿಂದು ತಿನ್ನುತ್ತಾ ಇದ್ದವರು ಸಿಪಾಯಿಗಳಿಗೆ ಹೇಳುತ್ತಿದ್ದರು–'ಅಯ್ಯೋ ! ಇನ್ನೆರಡು ನಿಮಿಷ ಇನ್ನೂ ಇಲ್ಲಿರಲು ನಮಗೆ ಅವಕಾಶ ಕೊಡಿರಿ. ನಾವು ಕಿತ್ತುಕೊಂಡಿರುವ ಹಣ್ಣು ಹಂಪಲುಗಳನ್ನು ಗಂಟು ಕಟ್ಟಿಕೊಳ್ಳುತ್ತೇವೆ. ಸಿಪಾಯಿಗಳು ಹೇಳಿದರು–'ಇಲ್ಲಿಂದ ಯಾರೂ ಏನನ್ನೂ ಸಹ ಮೂಟೆ ಕಟ್ಟಿ ತೆಗೆದುಕೊಂಡು ಹೋಗುವಂತಿಲ್ಲ, ನೀವು ಏನೇನು ಎಷ್ಟು ತಿಂದಿರೋ ಅದೇ ನಿಮ್ಮದು.' ಹಾಗೆಂದು ಹೇಳುತ್ತಾ ಅವರ ಗಂಟು ಮೂಟೆಗಳನ್ನು ಕಿತ್ತುಕೊಂಡು ಅವರನ್ನು ಹೊರಕ್ಕಟ್ಟಿದರು. ಯಾರು ಆಟ ತಮಾಶೆ, ಸಿನೆಮಾ ಮುಂತಾದವನ್ನು ನೋಡುತ್ತಿದ್ದರೋ, ಅವರಂತೂ ಅಲ್ಲಿಂದ ಏಳಲೂ ಇಚ್ಛೆಸುತ್ತಿರಲಿಲ್ಲ, ಆದರೆ ಅಲ್ಲಿ ಯಾರೂ ಸಹ ಒಂದು ನಿಮಿಷವೂ ಹೆಚ್ಚಾಗಿ ಇರುವುದಾದರೂ ಹೇಗೆ ತಾನೇ ಸಾಧ್ಯ? ಸಿಪಾಯಿಗಳು ಅವರನ್ನು ಹೊಡೆದು

ಬಲವಂತವಾಗಿ ಹೊರಗಟ್ಟಲಾರಂಬಿಸಿದರು. ಎಷ್ಟೋ ಮಂದಿ ರೂಪಾಯಿ, ಬಂಗಾರದ ನಾಣ್ಯ ಮತ್ತು ರತ್ನಗಳ ಗಂಟನ್ನು ಕಟ್ಟಿಕೊಂಡಿದ್ದರು. ಸಿಪಾಯಿಗಳು ಕೇಳಿದರು–'ಏನಿದು ಈ ಗಂಟನ್ನು ನೀವು ಏಕೆ ಕಟ್ಟಿಕೊಂಡಿರುವಿರಿ?' ಅವರು ಹೀಗೆ ಉತ್ತರವಿತ್ತರು–'ಇವುಗಳಲ್ಲಿ ರೂಪಾಯಿ, ಬಂಗಾರದ ನಾಣ್ಯ ಹಾಗೂ ರತ್ನಗಳಿವೆ. ನಾವು ಇವುಗಳನ್ನು ತೆಗೆದುಕೊಂಡು ಹೋಗುವೆವು.' ಸಿಪಾಯಿಗಳು ಅವರನ್ನು ಚೆನ್ನಾಗಿ ಬಡಿದು ಹೇಳಿದರು–'ಮೂರ್ಖರೇ ! ನೀವು ಕೇವಲ ಇವುಗಳ ದರ್ಶನ ಮಾತ್ರ ಮಾಡಬಹುದು, ಇಲ್ಲಿಂದ ಯಾರೂ ಒಂದು ಬಿಡಿ ಕಾಸನ್ನೂ ಕೂಡಾ ಜೊತೆಯಲ್ಲಿ ತೆಗೆದುಕೊಂಡು ಹೋಗುವಂತಿಲ್ಲ ಅವರುಗಳಿಗೆಲ್ಲಾ ಕಟ್ಟಿಕೊಂಡಿರುವ ಗಂಟನ್ನು ಬಿಟ್ಟು ಹೋಗಲು ಬಹಳ ದುಃಖವಾಗುತ್ತಿತ್ತು. ಆದರೆ ಉಪಾಯ ಕಾಣದೆ ಬಿಡಲೇ ಬೇಕಾಯಿತು. ಯಾರು ಯಾರು ಹೂವಿನ ಹಾಸಿಗೆಯಲ್ಲಿ ಮಲಗಿ ಪತ್ನಿಯರೊಡನೆ ಆನಂದ ಪಡುತ್ತಿದ್ದರೋ, ಅವರಂತೂ ಯಾವ ರೀತಿಯಿಂದಲೂ ಅಲ್ಲಿಂದ ಹೊರ ಹೋಗಲು ಇಚ್ಛಿಸುತ್ತಿರಲಿಲ್ಲ. ಆದರೆ ನಿಯಮವಿಲ್ಲದೆ ಯಾರೂ ಒಂದು ಕ್ಷಣವೂ ಸಹ ಇಲ್ಲಿ ಇರುವುದಾದರೂ ಹೇಗೆ? ಸಿಪಾಯಿಗಳು ಅವರನ್ನೂ ಸಹ ಅವಧಿ ಮುಗಿದ ಕೂಡಲೇ ಹೊಡೆದು ಹೊರಕ್ಕೆ ಕಳುಹಿಸಿದರು ಮತ್ತು ಗ್ರಾಮಾಫೋನ್, ರೇಡಿಯೋ ಮುಂತಾದುವನ್ನು ಕೇಳುತ್ತಿದ್ದವರಿಗೆ ಸಮಯ ಕಳೆದು ಹೋದದ್ದೇ ಗೊತ್ತಾಗಲಿಲ್ಲ. ಸಿಪಾಯಿಗಳು ಅವರ ಟಿಕೆಟ್ಟಿನ ನಂಬರುಗಳನ್ನು ನೋಡಿಕೊಂಡು ಹೇಳಿದರು–'ನಡೆಯಿರಿ ನಿಮ್ಮ ಸಮಯ ಮುಗಿಯಿತು.' ಕೇಳುತ್ತಿದ್ದವರು 'ಏನಯ್ಯ! ಈ ಹಾಡನ್ನು ಪೂರ್ತಿಕೇಳಲಾದರೂ ಬಿಡು ಎಂದು ಕೇಳಿಕೊಂಡರು. ನಿಮ್ಮ ಸಮಯ ಮುಗಿದು ಹೋಗಿದೆ, ನೀವು ಈಗ ಒಂದು ಕ್ಷಣವೂ ಸಹ ಇಲ್ಲಿರಲು ಸಾಧ್ಯವಿಲ್ಲ ಎಂದು ಹೇಳಿ ಸಿಪಾಯಿಗಳು ಅವರನ್ನೂ ಹೊಡೆದು ಬಲಾತ್ಕಾರವಾಗಿ ತೋಟದಿಂದ ಆಚೆಗೆ ನೂಕಿದರು.

ಇದೊಂದು ಕಾಲ್ಪನಿಕ ದೃಷ್ಟಾಂತ. ಇದನ್ನು ಉದಾಹರಣೆಯ ರೂಪದಲ್ಲಿ ಈ ಪ್ರಕಾರ ತಿಳಿದುಕೊಳ್ಳಬೇಕು–ಇಲ್ಲಿ ಚಕ್ರವರ್ತಿ ಪರಮೇಶ್ವರನಾಗಿದ್ದಾನೆ. ಆತನ ತೋಟವೇ ಈ ಜಗತ್ತು. ಆತನ ಘೋಷಣೇ ಶ್ರುತಿ ಸ್ಮೃತಿ ಮುಂತಾದ ಶಾಸ್ತ್ರ ಜನರು ಹೋಗುವುದು–ಬರುವುದೇ ಸೃಷ್ಟಿ. ತೋಟದಲ್ಲಿರಲು ನಿಯಮಿಸಲ್ಪಟ್ಟ

ಎರಡು ಘಂಟೆಯ ಸಮಯವೇ ಮನುಷ್ಯನ ಆಯುಷ್ಯ. ಚಕ್ರವರ್ತಿಯ ದರ್ಶನ ಮಾಡಲು ಯಾರಿಗೂ ಆಡಚಣೆಯಿಲ್ಲ, ಇದೇ ಮನುಷ್ಯಮಾತ್ರರಿಗೆ ಪರಮಾತ್ಮನ ಸಾಕ್ಷಾತ್ಕಾರ ಪ್ರಾಪ್ತಿಯಲ್ಲಿ ಸ್ವತಂತ್ರತೆಯ ಘೋಷಣೆ. ಯುವರಾಜಪದವಿಯೇ ಪರಮ ಮೋಕ್ಷಪ್ರಾಪ್ತಿ. ಸುಗಮ ಮತ್ತು ಸುಲಭವಾದ ರಸ್ತೆಗಳಲ್ಲಿ ನಡೆದುಕೊಂಡು ಅರ್ಧ ನಿಮಿಷದಲ್ಲಿ ಮಾರ್ಗವನ್ನು ದಾಟುವುದೇ ಭಕ್ತಿ ಮುಂತಾದ ಉಚ್ಛಶ್ರೇಣಿಯ ಸುಗಮ ಸಾಧನಗಳ ಮೂಲಕ ಆರು ತಿಂಗಳಲ್ಲಿ ಪರಮಾತ್ಮನ ಸಾಕ್ಷಾತ್ಕಾರದ ದಾರಿಯನ್ನು ಮುಗಿಸುವುದು. ವ್ಯವಸ್ಥಾಪಕನೇ ಧರ್ಮರಾಜ. ಟಿಕೆಟ್ ಕೊಡುವುದೇ ಆಯುಷ್ಯವನ್ನು ಕೊಡುವುದು. ಟಿಕೆಟ್ಟಿನ ನಕಲನ್ನು ತನ್ನ ಬಳಿಯಲ್ಲಿ ಇಟ್ಟುಕೊಳ್ಳುವುದೇ ಆಯುಸ್ಸಿನ ಲೆಕ್ಕವಿಟ್ಟುಕೊಳ್ಳುವುದು, ತೋಟಕ್ಕೆ ಪ್ರವೇಶಿಸುವುದು ಮತ್ತು ಹೊರಕ್ಕೆ ಬರುವುದೇ ಮನುಷ್ಯನ ಜನನ-ಮರಣ. ತೋಟದಲ್ಲಿ ಪ್ರವೇಶಮಾಡಿ ಪುಷ್ಪಾದಿಗಳ ಸುಗಂಧವನ್ನು ಸವಿಯುತ್ತಾ ಅಡ್ಡಾಡುವುದೇ, ಇಲ್ಲಿ ಘ್ರಾಣೇಂದ್ರಿಯಕ್ಕೆ ವಶನಾಗಿ ಮನುಷ್ಯನು ಪುಷ್ಪಮಾಲಾ, ಪನ್ನೀರು, ಸುಗಂಧಯುಕ್ತ ಎಣ್ಣೆ ಮುಂತಾದವುಗಳ ಸುವಾಸನೆಯಲ್ಲಿ ತನ್ನ ಸಮಯವನ್ನು ಹಾಳು ಮಾಡಿಕೊಳ್ಳುವುದು. ತೋಟದಲ್ಲಿ ಮಧುರವಾದ ಹಣ್ಣು ಹಂಪಲುಗಳನ್ನು ತಿನ್ನುವುದೇ, ಇಲ್ಲಿ ರಸನೇಂದ್ರಿಯಕ್ಕೆ ಮಾರುಹೋಗಿ ಮನುಷ್ಯನು ಭೋಜನಾದಿಗಳ ರಸಾಸ್ವಾದದಲ್ಲಿ ಸಮಯವನ್ನು ವ್ಯರ್ಥಮಾಡಿಕೊಳ್ಳುವುದು. ತೋಟದಲ್ಲಿ ಆಟ ತಮಾಶೆ ಇತ್ಯಾದಿಗಳನ್ನು ನೋಡುವುದೇ, ಇಲ್ಲಿ ಚಕ್ಷು ಇಂದ್ರಿಯಗಳಿಗೆ ಮರುಳಾಗಿ ಮನುಷ್ಯನು ಕ್ಷಣಭಂಗುರವಾದ ಆಶ್ಚರ್ಯಮಯ ಪದಾರ್ಥಗಳನ್ನು ನೋಡಿ ತನ್ನ ಅಮೂಲ್ಯ ಸಮಯವನ್ನು ಕಳೆದುಕೊಳ್ಳುವುದು. ತೋಟದಲ್ಲಿ ಹೆಂಗಸರೊಡನೆ ಪುರುಷರು ಹಾಸಿಗೆಯಲ್ಲಿ ರಮಿಸುವುದು ಮುಂತಾದವೇ ಇಲ್ಲಿ ತ್ವಚೇಂದ್ರಿಯದ ವಶವರ್ತಿಯಾಗಿ ಮನುಷ್ಯರ ಸ್ಪರ್ಶಾದಿ ಮೂಲಕ ಸ್ಪರ್ಶಯೋಗ್ಯ ಕ್ಷಣಭಂಗುರ ಪದಾರ್ಥಗಳನ್ನು ಉಪಭೋಗಿಸಿ ತಮ್ಮ ಜೀವನವನ್ನು ಅಪಾಯಕ್ಕೀಡು ಮಾಡುವುದು. ತೋಟದಲ್ಲಿ ಗ್ರಾಮಾಫೋನ್, ರೇಡಿಯೋ ಮುಂತಾದುವನ್ನು ಕೇಳುವುದೇ, ಇಲ್ಲಿ ಶ್ರೋತ್ರೇಂದ್ರಿಯಗಳಿಗೆ ದಾಸನಾಗಿ ಮನುಷ್ಯರ ಸವಿ ಮಾತುಗಳನ್ನು ಕೇಳಿ ತನ್ನ ಜೀವನದ ಅಮೂಲ್ಯ ಸಮಯವನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳುವುದು.

ರಾಜನ ದರ್ಶನವಿಲ್ಲದೆ ನಿರಾಶನಾಗುವುದೇ, ಇಲ್ಲಿ ಪರಮಾತ್ಮನ ಸಾಕ್ಷಾತ್ಕಾರ ಪ್ರಾಪ್ತಿಯಲ್ಲಿ ಶ್ರದ್ಧೆಯ ಕೊರತೆಯ ಕಾರಣದಿಂದ ಉಂಟಾಗುವ ಸಾಧನ ವಿಷಯ ಸಂಬಂಧದ ಅಕರ್ಮಣ್ಯತೆ-ತೋಟದಲ್ಲಿ ನೇರವಾಗಿ ರಾಜನ ಬಳಿಗೆ ಹೋಗುವಂತಹ ಮನ-ಇಂದ್ರಿಯಗಳ ಸಂಯಮೀ ವಿರಕ್ತ ಪುರುಷನೇ, ಇಲ್ಲಿ ಪರಮ ಸಾಕ್ಷಾತ್ಕಾರ ರೂಪೀ ಸಿದ್ಧಿಯನ್ನು ಪಡೆಯಲು ಯೋಗ್ಯನಾದ ಉಚ್ಚಶ್ರೇಣಿಯ ಸಾಧಕನು. ತೋಟದಲ್ಲಿ ರಾಜನ ದರ್ಶನ ಮಾಡುವುದೇ ಭಗವಂತನ ಸಾಕ್ಷಾತ್ಕಾರ ಮತ್ತು ಯುವ ರಾಜಪದವಿಯೇ ಪರಮಪದದ ಪ್ರಾಪ್ತಿ. ತೋಟದಲ್ಲಿ ತಿರುಗಾಡುವ ವ್ಯವಸ್ಥಾಪಕನ ಸಿಪಾಯಿಗಳು ಈ ಪ್ರಪಂಚದಲ್ಲಿ ಧರ್ಮರಾಜನ ದೂತರು. ಟಿಕೆಟ್ಟಿನ ಅವಧಿ ಸಮಾಪ್ತಿಯಾಗುವುದೇ ಇಲ್ಲಿ ಮನುಷ್ಯನ ಆಯುಷ್ಯದ ಸಮಾಪ್ತಿ. ತೋಟದಿಂದ ಜನರನ್ನು ಹೊರದೂಡವುದೇ ಇಲ್ಲಿ ಮನುಷ್ಯರನ್ನು ಯಮರಾಜನ ವಶಕ್ಕೆ ಒಪ್ಪಿಸುವುದು. ತೋಟದಲ್ಲಿ ಹಣ್ಣುಗಳ ಮತ್ತು ಹಣದ ಗಂಟುಕಟ್ಟುವುದೇ ಇಲ್ಲಿಸಾಯುವ ಸಮಯದಲ್ಲಿ ಅಜ್ಞಾನ ಮತ್ತು ಸ್ನೇಹದ ಕಾರಣದಿಂದ ಧನಾದಿ ಪದಾರ್ಥಗಳನ್ನು ಸಂಗ್ರಹಮಾಡುವುದು. ಇಚ್ಛೆಯಿಲ್ಲದಿದ್ದರೂ ಅವರನ್ನು ಸಿಪಾಯಿಗಳ ಹೊಡೆತದಿಂದ ಬಲಪೂರ್ವಕವಾಗಿ ಹೊರಕ್ಕೆ ದೂಡುವುದೇ ಇಲ್ಲಿ ಸಾಯುವ ಇಚ್ಛೆಯಿಲ್ಲದಿದ್ದರೂ ಯಮದೂತರು ಬಲಾತ್ಕಾರದಿಂದ ಪೀಡಿಸುತ್ತಾ ಯಮನ ಬಾಗಿಲಿಗೆ ಕರೆದುಕೊಂಡು ಹೋಗುವುದು. ತೋಟದಿಂದ ಹಣ್ಣು ಹಂಪಲು, ಹಣ ಮುಂತಾದ ಯಾವ ಪದಾರ್ಥವನ್ನೂ ಜೊತೆಯಲ್ಲಿ ತೆಗೆದುಕೊಂಡು ಹೋಗಕೂಡದೆಂಬುದೇ ಪ್ರಪಂಚದ ತಿಂಡಿ-ಮೃಷ್ಟಾನ್ನ, ಹಣ, ಸ್ತ್ರೀ-ಪುರುಷಾದಿ ಪದಾರ್ಥಗಳನ್ನು ಇಲ್ಲಿಯೇ ಬಿಟ್ಟು ಹೋಗುವುದು. ಏಕೆಂದರೆ, ಈ ಪ್ರಪಂಚದ ಯಾವುದೇ ವಸ್ತು ಕಿಂಚಿತ್ ಮಾತ್ರವೂ ಯಾವ ಪ್ರಕಾರದಿಂದಲೂ ಕೂಡ ಈ ಮುಂಚೆ ಇಂದಿನವರೆಗೂ ಯಾರ ಸಂಗಡವೂ ಹೋಗಿಲ್ಲ ಮತ್ತು ಮುಂದೆಯೂ ಹೋಗಲಾರದು. ಆದುದರಿಂದ ಈ ಕ್ಷಣಭಂಗುರವಾದ, ಎಂದಿದ್ದರೂ ನಾಶವಾಗುವ ಪದಾರ್ಥಗಳಿಂದ ಮತ್ತು ವಿಷಯಗಳಿಂದ ವೈರಾಗ್ಯಪೂರ್ವಕವಾಗಿ ಮನಸ್ಸು-ಇಂದ್ರಿಯಗಳನ್ನು ದೂರಕ್ಕೆ ತೊಲಗಿಸಿ ಪರಮಾತ್ಮನಲ್ಲಿ ತಲ್ಲೀನಗೊಳಿಸಬೇಕು.

❑❑❑

# ೮. ಭಗವಂತನು ಅನಾಯಾಸವಾಗಿ ಕೊಡುತ್ತಾನೆ

'ನೀನು ದಿನವಿಡೀ ಗೀತಾಪಠನ ಮಾಡು ಮತ್ತು ಗೀತೆಗನುಸಾರವಾಗಿ ಜೀವನವನ್ನು ರೂಪಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿರು; ಆದರೆ ಉದರ ಪೋಷಣೆಗೂ ಸ್ವಲ್ಪ ಗಮನವಿರಬೇಕು'–ಎಂದು ತಮ್ಮನು ಅಣ್ಣನಿಗೆ ಹೇಳಿದನು. ಅಣ್ಣನು ನಿರಂತರ ಗೀತಾಪಠನದಲ್ಲಿ ನಿರತನಾಗಿರುತ್ತಿದ್ದನು. ಸಂಪೂರ್ಣವಾಗಿ ಗೀತಾಪಠನಕ್ಕಿಂತಲೂ ಅರ್ಥ ಮತ್ತು ಭಾವ ಸಹಿತ ಒಂದು ಅಧ್ಯಾಯವನ್ನು ಪ್ರತಿ ದಿವಸವೂ ಪಠನ ಮಾಡುವುದು ಉತ್ತಮ, ಆದರೆ ಗೀತೆಯಲ್ಲಿ ಹೇಳಿದಂತೆ ತನ್ನ ಜೀವನವನ್ನುಸುಂದರಮಾಡಿಕೊಳ್ಳುವುದು ಅತ್ಯಂತ ಉತ್ತಮವೆಂದು ಅವನು ತಿಳಿದ್ದನು. ಗೀತೆಯಲ್ಲಿ ಇಂತಹ ಅನೇಕ ಶ್ಲೋಕಗಳಿವೆ; ಅವುಗಳಲ್ಲಿ ಯಾವುದಾದರೂ ಒಂದು ಶ್ಲೋಕವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವುದ ರಿಂದಲೇ ಶ್ರೇಯಸ್ಸುಂಟಾಗುತ್ತದೆ. ಆ ನಾಲ್ವರು ಸಹೋದರರಲ್ಲಿ ಈ ದೊಡ್ಡವನ್ನು ಗೀತಾಪ್ರೇಮಿಯಾಗಿದ್ದನು. ಅವನು ೧೨ ನೇ ಅಧ್ಯಾಯದ ೧೭ನೇ ಶ್ಲೋಕವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾ ಇದ್ದನು. ಮೇಲೆ ಹೇಳಿದ ತಮ್ಮನ ಮಾತನ್ನು ಕೇಳಿಸಿಕೊಂಡರೂ ಅವನು ಸುಮ್ಮನಿದ್ದನು.

'ಹಣ ಸಂಪಾದನೆಗಾಗಿ ನಮ್ಮ ಹಾಗೆ ನೀನೂ ಶ್ರಮಪಡಬೇಕಾಗುವುದು.' ಎಂದು ಎರಡನೇ ತಮ್ಮನು ಹೇಳಿದನು.

'ನಾವು ಎಲ್ಲಿಯವರೆಗೆ ಸಂಪಾದಿಸಿ ಊಟಹಾಕುವುದು?' ಮೂರನೆಯ ತಮ್ಮನೂ ಸಹ ಅವನನ್ನೇ ಸಮರ್ಥಿಸಿದನು.

'ನೀನು ಬೇರೆ ಹೋಗುವುದೇ ಎಲ್ಲಕ್ಕಿಂತ ಒಳ್ಳೆಯದು' ಎಂದು ಮೊದಲನೇ ತಮ್ಮನು ಆವೇಶದಿಂದ ಹೇಳಿಬಿಟ್ಟನು.

'ನಿಜವಾಗಿಯೂ ನಿಮ್ಮೊಡನೆ ನಾವುಗಳೆಲ್ಲಾ ಜೀವನ ನಿರ್ವಹಿಸಲು ಆಗುವುದಿಲ್ಲ.'–ಎರಡನೇ ತಮ್ಮನು ಮತ್ತಷ್ಟು ಕರ್ಕಶ ಧ್ವನಿಯಿಂದ ಹೇಳಿದನು.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥**

ಹಿರಿಯ ಅಣ್ಣನು ಗಂಭೀರವಾಗಿ ಉತ್ತರವಿತ್ತನು, ತಮ್ಮಂದಿರೇ! ಈ ಶ್ಲೋಕ ಗೀತೆಯದು. ಅರ್ಜುನನೊಡನೆ ಪರಮಾತ್ಮ ಹೇಳುತ್ತಾನೆ 'ಯಾರು ಯಾವಾಗಲೂ ಹರ್ಷಿಸುವುದಿಲ್ಲವೋ, ದ್ವೇಷಿಸುವುದೂ ಇಲ್ಲವೋ, ಶೋಕಿಸುವುದೂ ಇಲ್ಲವೋ, ಇಚ್ಛಿಸುವುದೂ ಇಲ್ಲವೋ ಹಾಗೂ ಯಾರು ಶುಭ ಮತ್ತು ಅಶುಭ ಸಮಸ್ತ ಕರ್ಮಗಳನ್ನು ತ್ಯಾಗಮಾಡಿ ಬಿಟ್ಟಿದ್ದಾನೆಯೋ, ಆ ಭಕ್ತಿಯುಳ್ಳ ಪುರುಷನು ನನಗೆ ಪ್ರಿಯನು.' ಗೀತಾಭ್ಯಾಸಿಯು ಶ್ಲೋಕವನ್ನು ಹೇಳುತ್ತಿರುವಂತೆ, ಈ ಮಧ್ಯೆ 'ಉಪದೇಶ ವನ್ನು ನಿನ್ನ ಹತ್ತಿರವೇ ಇಟ್ಟುಕೋ. ಈ ದಿನವೇ ನೀನು ಬೇರೆ ಹೋಗಿಬಿಡು' ಮೂರನೇ ತಮ್ಮನು ಬಿರುಸಿನಿಂದ ಹೇಳಿದನು.

ನೀವುಗಳೆಲ್ಲಾ ನನ್ನನ್ನು ಬೇರೆ ಮಾಡುವಿರಿ, ಅದರಿಂದ ನನಗೆ ಸಂತೋಷವಾ ಗಲೀ ಅಥವಾ ಶೋಕವಾಗಿ ಯಾವುದೂ ಇಲ್ಲ ಎಂದು ಗೀತಾಪ್ರೇಮಿ ಅಣ್ಣನು ಶಾಂತಿಯಿಂದಲೇ ಉತ್ತರವಿತ್ತನು. 'ದ್ವೇಷವೂ ಇಲ್ಲ ಮತ್ತು ಬೇರೆ ಹೋಗಬೇಕೆಂಬ ಅಪೇಕ್ಷೆಯೂ ಇಲ್ಲ, ಹರ್ಷ, ಶೋಕ, ಇಚ್ಛೆ ಹಾಗೂ ದ್ವೇಷಗಳಿಲ್ಲದ ಪುರುಷನೇ ಪರಮಾತ್ಮನಿಗೆ ಪ್ರಿಯ ಪಾತ್ರನು. ನಿಮಗೆ ಯಾವುದು ಉಚಿತವೆಂದು ತಿಳಿಯುವುದೋ ಹಾಗೆಯೇ ಮಾಡಿರಿ.'

'ಬೇರೇ ಕಳುಹಿಸದೇ ಇದ್ದರೆ ಇವನ ಬುದ್ಧಿ ಸರಿಹೋಗುವುದಿಲ್ಲ, ಸ್ವಾರಸ್ಯವಾದ ಉಪದೇಶಕೊಟ್ಟು ಆನಂದದಿಂದ ಕಾಲ ಹರಣ ಮಾಡಲು ಇಚ್ಛಿಸುತ್ತಾನೆ' ಮೊದಲನೇ ತಮ್ಮನು ತನ್ನ ನಿಶ್ಚಯವನ್ನು ತಿಳಿಸಿದನು.

'ನಾವುಗಳೆಲ್ಲಾ ಬಹಳ ದಿನಗಳವರೆಗೆ ಇವನ ಪಾಲನೆ–ಪೋಷಣೆ ಮಾಡಿದೆವು. ಈಗ ಬೇಸತ್ತು ಹೋಗಿದ್ದೇವೆ'– ಎರಡನೇ ತಮ್ಮನೂ ಮಿಕ್ಕವರನ್ನೇ ಅನುಮೋದಿಸಿದನು. ಒಟ್ಟಿಗೇ ಇದ್ದರೆ ಮೂವರಿಗೂ ಭೋಜನ ತಯಾರಿಸಬೇಕಾಗುವುದು'–ಒಳಗಿನಿಂದ ಗೀತಾಭ್ಯಾಸಿಯ ಜಗಳಗಂಟಿ ಪತ್ನಿಯು ಗಟ್ಟಿಯಾಗಿ ಹೇಳಿದಳು–'ಮೂವರೂ ಬೇರೆಯಾಗಿ ಹೋಗಲಿ ಬಿಡಿ, ತೊಂದರೆಯೇನೂ ಇಲ್ಲ.

'ಅನುಕೂಲ ಪರಿಸ್ಥಿತಿಯಲ್ಲಿ ಯಾರಿಗೆ ಹರ್ಷ ಉಂಟಾಗುವುದಿಲ್ಲವೋ, ಅವನೇ ಪರಮಾತ್ಮನಿಗೆ ಪ್ರಿಯವಾದವನು.' ಗೀತಾಭ್ಯಾಸಿಯು ತನ್ನ ಪತ್ನಿಗೆ ಪ್ರೇಮದಿಂದ

ತಿಳಿಸಿದನು–'ನೀನು ಈ ರೀತಿ ಮಾತನಾಡಬಾರದು. ಆದರೆ ಇದು ಅನುಕೂಲವೇನೂ ಅಲ್ಲ; ಏಕೆಂದರೆ ಭಗವಂತನು ನಿನಗೆ ಇಷ್ಟೊಂದು ಜೀವಿಗಳ ಸೇವೆಯ ಅವಕಾಶ ಕಲ್ಪಿಸಿಕೊಟ್ಟಿದ್ದನು. ಇದು ನಿನ್ನ ಸೌಭಾಗ್ಯದ ಮಾತಾಗಿತ್ತು. ನೀನು ಇದಕ್ಕಾಗಿ ಪರಮಾತ್ಮನಿಗೆ ಕೃತಜ್ಞಳಾಗಬೇಕಾಗಿತ್ತು.'

ಇಷ್ಟು ಒಡವೆ, ವಸ್ತ್ರ ಪಾತ್ರೆ ಮತ್ತು ಹಣ ಮತ್ತು ನೀನಿರುವುದಕ್ಕಾಗಿ ಚಿಕ್ಕದೊಂದು ಮನೆ.' ಮೂವರು ಸಹೋದರರು ಅಣ್ಣನ ಮುಂದೆ ಸ್ವಲ್ಪ ವಸ್ತುಗಳನ್ನು ಇಟ್ಟು ಬಿಟ್ಟರು. ಸಹೋದರರೆಲ್ಲಾ ಆವೇಶದಲ್ಲಿದ್ದರು. ಅತ್ತಿಗೆಯ ಕಟು ವಚನಗಳು ಕ್ರೋಧಾಗ್ನಿಯಲ್ಲಿ ತುಪ್ಪದಂತೆ ಕೆಲಸಮಾಡಿತ್ತು.

'ಭಗವಂತನ ಇಚ್ಛೆಯಂತಾಗಲಿ'– ಗೀತಾಭ್ಯಾಸಿಯು ಶಾಂತಿಯಿಂದ ಹೇಳಿದನು. ಅವನ ಮುಖ ಭಾವವು ಮೊದಲಿನಂತೆಯೇ ಸಹಜ ಪ್ರಸನ್ನತೆ ಮತ್ತು ಶಾಂತವಾಗಿತ್ತು. ಚಿಂತೆಯ ಯಾವ ಚಿಹ್ನೆಯೂ ಅವನ ಆಕೃತಿಯಲ್ಲಿ ಕಂಡು ಬರುತ್ತಿರಲಿಲ್ಲ. ಈಗಲೂ ಸಹ ನೀವು ಸುಮ್ಮನೆ ಕುಳಿತಿರುವಿರಿ, ಕೆಲಸ ನಡೆಯುವುದು ಹೇಗೆ'? ಗೀತಾಭ್ಯಾಸಿಯ ಪತ್ನಿಯು ಹೇಳಿದಳು. **'ನ ಕಾಂಕ್ಷತಿ'** ಎಂಬ ಉತ್ತರ ದೊರೆಯಿತು; ನನಗೆ ಯಾವ ಹಣದ ಆಕಾಂಕ್ಷೆಯೂ ಇಲ್ಲ, ಆಕಾಂಕ್ಷೆರಹಿತನಾದ ವ್ಯಕ್ತಿಯೇ ಭಗವಂತನಿಗೆ ಪ್ರಿಯನು.

'ಇರುವ ಹಣ ಖರ್ಚಾದ ನಂತರ ಜೀವನ ಹೇಗೆ ನಡೆಯುವುದು'? ಪುನಃ ಪ್ರಶ್ನೆ ಬಂತು.

**'ನ ಶೋಚತಿ'** ಅಳತೆ ತೂಕದಂತಹ ಉತ್ತರ ಸಿಕ್ಕಿತು. 'ಶೋಕರಹಿತನಾದ ಪುರುಷನು ಪರಮಾತ್ಮನಿಗೆ ಪ್ರೀತಿ ಪಾತ್ರನು. ಆದುದರಿಂದ ಜೀವನೋಪಾಯಕ್ಕಾಗಿ ನನಗೆ ಶೋಕವಿಲ್ಲ' ಗೀತಾಭ್ಯಾಸಿಯ ಪತ್ನಿ ಸುಮ್ಮನಾದಳು.

'ಈಗ ನನ್ನ ಹತ್ತಿರ ಹಣವಿಲ್ಲ, ಏನು ಮಾಡಲಿ? ಚಿಂತಾಕ್ರಾಂತಳಾದ ಪತ್ನಿಯು ಒಂದು ದಿವಸ ಪತಿಯನ್ನು ಕೇಳಿದಳು.

**'ನ ಕಾಂಕ್ಷತಿ'** ಅದೇ ಹಿಂದಿನ ಉತ್ತರ ದೊರೆಯಿತು.

'ಒಡವೆಗಳಾದರೋ ಶರೀರದ ಮೇಲೆ ಒಂದೂ ಇಲ್ಲ' ದುಃಖಿಯಾದ

ಪತ್ನಿಯು ಕೆಲವು ದಿನಗಳ ನಂತರ ಪುನಃ ಹೇಳಿದಳು. ಇದ್ದುದ್ದೆಲ್ಲವೂ ಹೊಟ್ಟೆ ತುಂಬಿಸುವುದರಲ್ಲಿ ಮುಗಿದುಹೋದವು. ಈಗ ನೀವು ಏನನ್ನಾದರೂ ಮಾಡಿ.'

**'ನ ಶೋಚತಿ'** ಪುನಃ ಅದೇ ನಾಲ್ಕು ಅಕ್ಷರಗಳ ಉತ್ತರ, ಹೆಂಡತಿ ನಿರಾಶಳಾದಳು, ಮನಸ್ಸಿನಲ್ಲಿಯೇ ವ್ಯಥೆ ಪಡುತ್ತಿದ್ದಳು.

'ಈಗ ನನ್ನ ಹತ್ತಿರ ಏನು ಉಳಿದಿಲ್ಲ' ಅಳುತ್ತಾ ಗೀತಾಭ್ಯಾಸಿಯ ಪತ್ನಿಯು ಹೇಳಲು ಪ್ರಾರಂಭಿಸಿದಳು. ನಮ್ಮ ಮನೆ ಮಾರಾಟವಾಗಿ ಹೋಯಿತು. ಮನೆ ಬಾಡಿಗೆಯದು. ಬೇರೆಯವರಿಂದ ಪಾತ್ರೆಯನ್ನು ತಂದು ಅಡಿಗೆ ಮಾಡಿದ್ದೇನೆ. ಉಡಲು ಎರಡೆರಡು ಬಟ್ಟೆಗಳನ್ನು ಬಿಟ್ಟರೆ ಈಗ ನಮ್ಮ ಬಳಿಯಲ್ಲಿ ಹಣ ಕಾಸು, ಒಡವೆ ವಸ್ತ್ರ, ಪಾತ್ರೆ, ಪರಟೆ ಅಥವಾ ಜೀವನ ನಿರ್ವಹಣೆಯಾಗುವಂತಹ ಬೇರೆ ಯಾವ ವಸ್ತುವೂ ಉಳಿದಿಲ್ಲ. ಈಗಲಾದರೂ ಏನಾದರೂ ಕೆಲಸ ಮಾಡಿರಿ' ಪತ್ನಿಯು ಆಶಾಭಾವಳಾಗಿ ಆಗ್ರಹ ಪಡಿಸಿದಳು.

**'ನ ಕಾಂಕ್ಷತಿ'** ಅದೇ ಹಳೆಯ ಉತ್ತರ ಬಂದಿತು' ನನಗೆ ಯಾವ ಆಕಾಂಕ್ಷೆಯೂ ಇಲ್ಲ.'

'ಕೊನೆಗೆ ಮಾಡುವುದೇನು?' ಕಣ್ಣೀರನ್ನು ಒರೆಸಿಕೊಳ್ಳುತ್ತಾ ಅಧೀರಳಾದ ಆ ನಾರಿಯು ಹೇಳಿದಳು.

**'ನ ಶೋಚತಿ'**- ನಾನು ದುಃಖ ಪಡುವುದಿಲ್ಲ, ಅಂತಹ ಪುರುಷನೇ ಪರಮಾತ್ಮನಿಗೆ ಪ್ರಿಯನು' ಎಂದು ಹೇಳಿ ಗೀತಾಭ್ಯಾಸಿಯು ಮೌನವಾದನು.'

'ಬಹಳ ವಿಚಿತ್ರವಾದ ತಲೆ ನಿಮ್ಮದು!' ಪತ್ನಿಯು ಸಿಡುಕಿನಿಂದ ಹೇಳಿ 'ಎಲ್ಲವೂ ಮುಗಿದು ಹೋದ ಮೇಲೆಯಾದರೂ ನೀವು ಏನನ್ನಾದರೂ ಮಾಡುವಿರೆಂಬ ಆಶೆ ನನಗಿತ್ತು. ಆದರೆ **'ನ ಕಾಂಕ್ಷತಿ' 'ನ ಶೋಚತಿ'** ಇದರಿಂದಲೇ ಭಗವಂತನು ಸಂತುಷ್ಟನಾಗಿರುತ್ತಾನೆ'- ಇದೆಲ್ಲವನ್ನೂ ಕೇಳಿ ಕೇಳಿ ನಾನು ಕಂಗೆಟ್ಟು ಹೋದೆ.

'ನಾನು ಸತ್ಯವಾದ ಮಾತನ್ನು ಹೇಳುತ್ತೇನೆ ಬ್ರಾಹ್ಮಣೀ!' ಗೀತಾಭ್ಯಾಸೀ ಹೇಳಲಾರಂಭಿಸಿದ-'ಈ ದಿನವೇ ಪ್ರಾತಃಕಾಲದ ಮಾತು. ಶೌಚಕರ್ಮದಿಂದ ನಿವೃತ್ತನಾಗಿ ನಾನು ನದೀ ತೀರಕ್ಕೆ ಹೋದಾಗ ನೋಡಿದೆ ನದಿಯ ನೀರು ಮೇಲಿನಿಂದ

ಒಣಗಿಹೋಗಿದೆ, ಒಳಗೊಳಗೇ ಹರಿಯುತ್ತಾ ಇದೆ. ನೀರಿಗಾಗಿ ನಾನು ಘಾಟಿನ ದಡದಲ್ಲಿಯೇ ಗುಂಡಿ ತೋಡಿದರೆ ಅಲ್ಲಿ ಮಣಿ ಮಾಣಿಕ್ಯ ಹಾಗೂ ಸುವರ್ಣ ನಾಣ್ಯಗಳಿಂದ ತುಂಬಿದ ಒಂದು ದೊಡ್ಡ ಬುಟ್ಟಿ ಸಿಕ್ಕಿತು. ಆಗ ಭಗವಂತನ ವಾಕ್ಯ ನನಗೆ ತಕ್ಷಣ ಜ್ಞಾಪಕಕ್ಕೆ ಬಂತು 'ಅನುಕೂಲವಾದದ್ದು ದೊರೆತಾಗ ಯಾರು ಸಂತೋಷಪಡುವುದಿಲ್ಲವೋ, ಅವನು ನನಗೆ ಪ್ರಿಯನು.' ಆದುದರಿಂದ ಆ ರತ್ನರಾಶಿಯನ್ನು ನೋಡಿದರೂ ನಾನು ಕಿಂಚಿತ್ತಾದರೂ ಸಂತೋಷಪಡಲಿಲ್ಲ. ಭಗವಂತನು '**ನ ದ್ವೇಷ್ಟಿ**' ಎಂದು ಹೇಳಿದ್ದಾನೆ. ಆದುದರಿಂದ ನಾನು ಅದನ್ನು ದ್ವೇಷಿಸಲೂ ಇಲ್ಲ. ಅದನ್ನು ತೆಗೆದುಕೊಂಡು ಎಲ್ಲಿಗೂ ಬಿಸಾಡಲೂ ಇಲ್ಲ. ನನಗೆ ಅದರ 'ಆಕಾಂಕ್ಷೆ'ಯೂ ಇರಲಿಲ್ಲ. ನಾನು ಅದನ್ನು ಹೇಗಿತ್ತೋ ಹಾಗೆಯೇ ಮುಚ್ಚಿ ಹಿಂದಿರುಗಿ ಬಂದುಬಿಟ್ಟೆ. ಆ ಅನಂತ ಧನದ ರಾಶಿಯನ್ನು ಪರಿತ್ಯಜಿಸಲೂ ಕಿಂಚಿತ್ತೂ ನನಗೆ ಸಂತೋಷವಾಗಲಿಲ್ಲ, ದ್ವೇಷವೂ ಇಲ್ಲ ಮತ್ತು ಪಶ್ಚಾತ್ತಾಪವೂ ಆಗಲಿಲ್ಲ ಹಾಗೂ ಆಕಾಂಕ್ಷೆಯೂ ಇಲ್ಲ. ಅದನ್ನು ನಾನು ತೆಗೆದುಕೊಂಡು ಬರಲೂ ಇಲ್ಲ; ಆದರೆ ಯಾರಾದರೂ ತಂದು ನನಗೆ ಕೊಟ್ಟರೆ ನಾನು ಇಟ್ಟುಕೊಳ್ಳುವೆನು ಎಂಬೀ ಅನಿಸಿಕೆಯ ಭಾವನೆಯೂ ನನಗಿಲ್ಲ. ಏಕೆಂದರೆ ಭಗವಂತನು ಹೇಳಿದ್ದಾನೆ–'ಯಾರು ಶುಭ–ಅಶುಭ ಇತ್ಯಾದಿಗಳ ಪರಿತ್ಯಾಗಿಯಾಗಿರುತ್ತಾನೆಯೋ, ಅವನು ನನಗೆ ಪ್ರಿಯನಾಗುತ್ತಾನೆ.'

ಹೆಂಡತಿಯು ರೇಗಿಕೊಂಡು ಹೇಳಿದಳು–'ನಿಮಗೇನೂ ಬೇಡ ಸರಿ, ನನಗಾದರೋ ಆಕಾಂಕ್ಷೆಯಿದೆ '. ಪಂಡಿತನು ಹೇಳಿದನು–'ನೀನೂ ಸಹ ಆಕಾಂಕ್ಷೆ ಪಡಬಾರದು.'

ಅದೇ ರತ್ನಗಳ ಬುಟ್ಟಿಯನ್ನು ಕಳ್ಳರ ಗುಂಪಿನವರು ನೋಡಿದರು. 'ಅಯ್ಯೋ! ಇದೊಂದು ಕೃಷ್ಣಸರ್ಪ–ಬೆಚ್ಚಿಬೀಳುತ್ತಾ ಒಬ್ಬ ಕಳ್ಳ ಹೇಳಿದನು. 'ಗೀತಾಭ್ಯಾಸಿಯು ಪರಮ ದುಷ್ಟ' ಎರಡನೇ ಕಳ್ಳ ಹೇಳಿದನು. 'ನಾವುಗಳೆಲ್ಲಾ ಅವನ ಮನೆಗೆ ನುಗ್ಗಿದ್ದೇವೆಂದು ಅವನು ತಿಳಿದುಕೊಂಡಿದ್ದನು. ಆದುದರಿಂದ ಜ್ಞಾನದ ಜಂಭಕೊಚ್ಚಿಕೊಳ್ಳತೊಡಗಿದ ಮತ್ತು ನಮಗೆ ಹಾವಿನಿಂದ ಕಚ್ಚಿಸಬೇಕೆಂಬ

ಉದ್ದೇಶದಿಂದಲೇ ಬುಟ್ಟಿಯಲ್ಲಿ ವಜ್ರ-ವೈಡೂರ್ಯಗಳನ್ನು ತೋರಿಸಿ ಅವನು ನಮಗೆ ಮೋಸ ಮಾಡಿದ್ದಾನೆ.'

'ಅವನ ಹೆಂಡತಿಯೇನು ಕಡಿಮೆ ಚತುರಳಲ್ಲ.' ಮೂರನೇ ಕಳ್ಳ ತಕ್ಷಣ ಹೇಳಿಬಿಟ್ಟನು. 'ಇಬ್ಬರೂ ಸೇರಿಕೊಂಡು ನಮ್ಮೆಲ್ಲರನ್ನೂ ಗೋಳಾಡಿಸಿದ್ದಾರೆ.

ಇದೇ ಯುಕ್ತಿಯನ್ನು ಅವರ ಮೇಲೆ ಪ್ರಯೋಗ ಮಾಡಿದರೆ, ನಾಲ್ಕನೆಯವನು ಸಲಹೆ ಮಾಡಿದನು. ಹಾವಿನ ಸಮೇತ ಬುಟ್ಟಿಯನ್ನು ಅವನ ಗುಡುಸಿಲಿನಲ್ಲಿ ಹಾಕಿ ಬಿಡೋಣ, ಸರಿ, **'ನ ಶೋಚತಿ'**, **'ನ ಕಾಂಕ್ಷತಿ'** ಯ ಪೂರ್ಣ ಅಭ್ಯಾಸ ಆಗಿ ಹೋಗುವನು.'

ರಾತ್ರಿಯಲ್ಲಿ ಬ್ರಾಹ್ಮಣನು ತನ್ನ ಪತ್ನಿಯೊಡನೆ ಬುಟ್ಟಿಯ ವಿಚಾರವನ್ನು ಹೇಳುತ್ತಿದ್ದ ಸಮಯದಲ್ಲಿ ಕಳ್ಳರು ಮನೆಗೆ ನುಗ್ಗಿದರು ಮತ್ತು ಅವರು ಈ ವಿಚಾರವನ್ನೆಲ್ಲಾ ಕೇಳಿಸಿಕೊಂಡು ಹಣದ ಆಸೆಯಿಂದ ನದೀ ತೀರಕ್ಕೆ ಬಂದು ಬುಟ್ಟಿಯನ್ನು ಹೊರಕ್ಕೆ ತೆಗೆದಿದ್ದರು ಮತ್ತು ಅದರ ಬಾಯನ್ನು ತೆರೆದ ಕೂಡಲೇ ಭಯಂಕರ ಕೃಷ್ಣ ಸರ್ಪವು ಬುಸುಗುಟ್ಟುವುದು ಕಂಡು ಬಂದಿತು. ಆಗ ಅವರಲ್ಲಿ ಮೇಲೆ ತಿಳಿಸಿದ ಸಂಭಾಷಣೆ ನಡೆಯಿತು.

ನಾಲ್ಕನೇ ಕಳ್ಳನ ಮಾತನ್ನು ಎಲ್ಲರೂ ಏಕ ಕಂಠದಿಂದ ಸಮರ್ಥಿಸಿದರು. ಬುಟ್ಟಿಯ ಬಾಯನ್ನು ಹಾಗೆಯೇ ಮುಚ್ಚಿ ನಾಲ್ವರೂ ಕಳ್ಳರೂ ಅದನ್ನು ಹೆಗಲ ಮೇಲೆ ಹೊತ್ತರು. ಏದುತ್ತಾ ಎಲ್ಲರೂ ಗೀತಾಭ್ಯಾಸಿಯ ಮನೆಗೆ ಬಂದರು. ಮನೆಯ ಮೇಲ್ಛಾವಣಿಯಲ್ಲಿ ಒಂದು ತೂತನ್ನು ಮಾಡಿ ಮೂವರು ಪಲಾಯನ ಮಾಡಿದರು. ನಾಲ್ಕನೆಯವನು ಬುಟ್ಟಿಯನ್ನು ಆ ತೂತಿನ ಬಾಯಲ್ಲಿ ಬೋರಲು ಹಾಕಿ ಓಡಿಹೋದನು.

'ರೀ, ಇಲ್ಲಿ ನೋಡಿ ಚಿನ್ನದ ನಾಣ್ಯಗಳ ರಾಶಿ !' ಗೀತಾಭ್ಯಾಸೀ ಪಂಡಿತನ ಪತ್ನಿಯು ಮಣಿ-ಮಾಣಿಕ್ಯ ಮತ್ತು ಬಂಗಾರದ ನಾಣ್ಯಗಳ ಶಬ್ದದಿಂದ ಎಚ್ಚರ ಗೊಂಡಳು. ಸರ್ಪವು ಮಣಿಗಳ ಕೆಳಗಡೆ ಸಿಕ್ಕಿಬಿದ್ದು ಪರಲೋಕಕ್ಕೆ ಹೊರಟುಹೋಗಿತ್ತು. ಬ್ರಾಹ್ಮಣಿಯು ಹರ್ಷಾತಿರೇಕದಿಂದ ಉಬ್ಬಿಹೋಗುತ್ತಿದ್ದಳು.

ಅವಳು ಹೇಳಿದಳು – 'ಭಗವಂತನು ಅನಾಯಾಸವಾಗಿ ರತ್ನ-ಭಂಡಾರವನ್ನು ಕಳುಹಿಸಿಕೊಟ್ಟನು.'

'ಸಂತೋಷದಿಂದ ಉಬ್ಬಿಹೋಗಬಾರದು.' ಪಂಡಿತನು ಸಹಜವಾದ ಭಾವನೆಯಿಂದ ಕೂಡಲೇ ಹೇಳಿದನು. ಪ್ರಿಯ ವಸ್ತುವನ್ನು ಪಡೆದುಕೊಂಡು ಯಾರು ಸಂತೋಷ ಪಡುವುದಿಲ್ಲವೋ, ಭಗವಂತನು ಅವನನ್ನು ಪ್ರೀತಿಸುತ್ತಾನೆ.

'ನಾವು ಕ್ಷಮೆ ಕೇಳುತ್ತೇವೆ' ಮೂವರು ಸಹೋದರರೂ ಒಂದು ದಿನ ಬಂದು ನಾಚುತ್ತಾ ಹೇಳಿದರು.

'ನಾನು ಯಾರನ್ನೂ ದ್ವೇಷಿಸುವುದಿಲ್ಲ. ನೀವೆಲ್ಲಾ ನನ್ನ ಸಹೋದರರು ನನ್ನನ್ನು ಸಂಕೋಚ ಪಡಿಸಬೇಡಿರಿ'–ಗೀತಾಭ್ಯಾಸಿಯು ಬಹು ನಮ್ರತೆಯಿಂದ ಹೇಳಿದನು.

'ಅಣ್ಣಾ! ಆ ಮೂವರು ತಮ್ಮಂದಿರಿಗೂ ಕೊರಳ ಸ್ವರ ತುಂಬಿಬಂತು. ಅವರಿಗೆ ಇಂತಹ ಪ್ರೇಮ ಪೂರಿತ ಶಬ್ದಗಳು ಅಣ್ಣನಿಂದ ಬರುವುದೆಂದು ನಂಬಿಕೆಯಿರಲಿಲ್ಲ. ಒಬ್ಬನು ಹೇಳಿದನು–'ನಿನ್ನಿಂದ ಬೇರೆಯಾದ ಮೇಲೆ ನಾವುಗಳು ಯಾವಾಗಲೂ ನಷ್ಟವನ್ನೇ ಅನುಭವಿಸಬೇಕಾಗಿ ಬಂದಿದೆ. ಲಕ್ಷ್ಮೀದೇವಿಯು ಮನೆಯನ್ನೇ ತ್ಯಾಗ ಮಾಡಿದಳು. ನಾವೆಲ್ಲಾ ಸಾಲಗಾರರಾಗಿ ಹೋದೆವು. ಹೊಟ್ಟೆ ಹೊರೆಯುವುದೇ ಕಷ್ಟವಾಗಿ ಸಮಾಜದಲ್ಲಿ ಅವಮಾನಿತರೂ ಹಾಗೂ ದೋಷಪೂರ್ಣ ಜೀವನ ಸಾಗಿಸುತ್ತಿದ್ದೇವೆ.'

'ನಮ್ಮ ಜೀವನ ಭಾರವಾಯಿತು ಅಣ್ಣಾ!' ಎರಡನೇ ತಮ್ಮ ಹೇಳಿದನು. 'ನಾಚಿಕೆಯಿಂದ ನಾವು ನಿನ್ನ ಹತ್ತಿರ ಬರುವುದಕ್ಕಾಗಲಿಲ್ಲ. ಆದರೆ ಈಗ ತೊಂದರೆಗಳೇ ನಮ್ಮನ್ನು ಕಳುಹಿಸಿವೆ'–ಮೂರನೇ ತಮ್ಮ ಹೇಳಿದನು.

'ಒಡಹುಟ್ಟಿದವನು ನೀನೇ'–ಪುನಃ ಮೊದಲನೇ ತಮ್ಮ ಹೇಳಿದನು.

'ನೀನು ಪುಣ್ಯಾತ್ಮನಾಗಿರುವೆ. ಪ್ರತಿದಿನವೂ ದೀನರಿಗೆ ಇಷ್ಟೊಂದು ಹಣವನ್ನು ಕೊಡುಕೈಯಾಗಿ ಹಂಚುತ್ತಾ ಇರುವೆ. ನಾವಾದರೋ ನಿನ್ನ ತಮ್ಮಂದಿರು, ನಮ್ಮನ್ನು ಕ್ಷಮಿಸಿಬಿಡು' – ಎರಡನೆಯವನು ಅಂಗಲಾಚುತ್ತಾ ಹೇಳಿದನು.

'ರತ್ನ-ಚಿನ್ನದ ನಾಣ್ಯಗಳನ್ನು ನೀವೆಲ್ಲಾ ತೆಗೆದುಕೊಂಡು ಹೋಗಿ' ಗೀತಾಭ್ಯಾಸೀ ಪಂಡಿತನ ಪತ್ನಿಯು ಮೂವರು ಮೃದುರ ಕರುಣಾಯುಕ್ತ ದೀನತೆಯ ಮಾತುಗಳನ್ನು ಕೇಳಿ ಕನಿಕರಪಟ್ಟುಕೊಂಡಳು. ಅಲ್ಪಸ್ವಲ್ಪ ಚಿನ್ನದ ನಾಣ್ಯಗಳನ್ನು ತಂದುಕೊಡುತ್ತಾ ಹೇಳಿದಳು-'ನಮಗೇನೋ ಭಗವಂತನು ಅನಾಯಾಸವಾಗಿ ಕೊಟ್ಟಿದ್ದಾನೆ, ಮತ್ತೂ ಸಹ ಕೊಡುತ್ತಾ ಹೋಗುವನು' ಇಂತಹ ಆಕಾಂಕ್ಷೆಯನ್ನು ನೀನು ಮಾಡಬಾರದು ತನ್ನ ಪತ್ನಿಯನ್ನು ಸಂಬೋಧಿಸುತ್ತಾ ಪಂಡಿತನು ಹೇಳಿದನು-'ಆಕಾಂಕ್ಷೆರಹಿತ ಪುರುಷನೇ ಭಗವಂತನಿಗೆ ಪ್ರೀತಿಪಾತ್ರನಾಗುತ್ತಾನೆ.'

'ಅಪರಾಧಕ್ಕಾಗಿ ಕ್ಷಮೆ ಕೇಳಿಕೊಳ್ಳುತ್ತೇನೆ' ಪತ್ನಿಯು ತಪ್ಪನ್ನು ಒಪ್ಪಿಕೊಂಡಳು.'

'ಅಣ್ಣಾ! ನೀನು ನಮ್ಮನ್ನೂ ನಿನ್ನೊಡನೆ ಸೇರಿಸಿಕೊ; ಒಬ್ಬ ತಮ್ಮನು ಪ್ರಾರ್ಥಿಸಿ ಕೊಂಡನು. ಹೌದು ಅಣ್ಣಾ! ನೀನು ಬಹಳ ಕೃಪೆ ತೋರಿಸಿದಂತೆ ಆಗುವುದು'- ಇನ್ನೊಬ್ಬ ತಮ್ಮನೂ ಸಹ ಆಗ್ರಹಪಡಿಸಿದನು. ನಿನ್ನ ಪುಣ್ಯದಿಂದ ನಾನು ಋಣ ಮುಕ್ತರಾಗಿ ಹೋಗುವೆವು, ನಮ್ಮೆಲ್ಲರ ದುಃಖವೆಲ್ಲಾ ನಾಶವಾಗುವುದು, ಅಣ್ಣಾ! ಮೂರನೆಯವನೂ ಸಹ ವಿನಂತಿಸಿಕೊಂಡನು.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಉಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥**

ಗೀತಾಭ್ಯಾಸೀ ಪಂಡಿತನು ಅದೇ ಹಿಂದಿನ ಶ್ಲೋಕ, ತನ್ನ ಪ್ರಾಣ ವಾಗಿದ್ದುದರಿಂದ ಪುನಃ ಅದನ್ನೇ ಹೇಳಿದನು, ನೀವುಗಳೆಲ್ಲಾ ನನ್ನನ್ನು ಪುನಃ ಒಟ್ಟಿಗೆ ಸೇರಿಸಿಕೊಳ್ಳಲು ಇಚ್ಛಿಸುತ್ತೀರಿ, ಇದರಿಂದ ನನಗೆ ಯಾವ ರೀತಿಯ ತೊಂದರೆ ಇಲ್ಲ ಮತ್ತು ಸಂತೋಷವೂ ಇಲ್ಲ. ಪುನಃ ನೀವು ನನ್ನನ್ನು ನಿಮ್ಮಲ್ಲಿ ದ್ವೇಷವನ್ನೂ ಸಹ ಇಟ್ಟುಕೊಳ್ಳುವುದಿಲ್ಲ ಏಕೆಂದರೆ ಹರ್ಷ, ದ್ವೇಷ, ಶೋಕ, ಆಕಾಂಕ್ಷೆ ಹಾಗೂ ಶುಭಾಶುಭಗಳನ್ನು ಪರಿತ್ಯಾಗ ಮಾಡುವ ಪುರುಷನೇ ಭಗವಂತನ ನಿಜವಾದ ಪ್ರೇಮಿ ಎಂದು ತಿಳಿಯಲಾಗುತ್ತದೆ.

'ನೀನು ಪಾದಾರ್ಪಣ ಮಾಡಿದ ಕೂಡಲೆ ನಿನ್ನ ಕೃಪೆಯಿಂದ ನಮ್ಮ ಮನೆ ಮತ್ತು ಮನೆಯ ಗಿರಿವಿಟ್ಟಿದ್ದ ಎಲ್ಲಾ ಸಾಮಾನುಗಳೂ ಬಿಡಿಸಲ್ಪಟ್ಟವು. ನಾವು

ಋಣಮುಕ್ತರಾಗಿ ಹೋದೆವು'–ನಾಲ್ವರು ಸಹೋದರರೂ ಒಂದಾಗಿ ಸೇರಿದ ಮೇಲೆ ಒಂದು ದವಸ ಎಲ್ಲರಿಗಿಂತ ಚಿಕ್ಕವನಾದ ತಮ್ಮನು ಹೇಳಿದನು 'ನಮ್ಮ ಜೀವನ ಆನಂದವಾಗಿ ಸಾಗುತ್ತಾ ಇದೆ.'

'ಲಕ್ಷ್ಮೀದೇವಿಯು ನಮ್ಮ ಮೇಲೆ ಬಹಳ ಕೃಪೆ ತೋರಿಸಿದ್ದಾಳೆ' ಎರಡನೆ ತಮ್ಮನು ಹೇಳಿದನು.

**'ಯೋ ನ ಹೃಷ್ಯತಿ ನ ದ್ವೇಷ್ಟಿ.....'** ಎಂಬ ಶ್ಲೋಕವನ್ನು ಹಾಡುತ್ತಾ ಗೀತಾಭ್ಯಾಸಿ ಪಂಡಿತನ ಪತ್ನಿಯು ಬಂದು ಹೇಳಿದಳು–'ನಡೆಯಿರಿ ಊಟ ಸಿದ್ಧವಾಗಿದೆ.'

ಭೋಜನಕ್ಕೆ ಹೊರಡುತ್ತಾ ಮೂರನೇ ತಮ್ಮನು ಹೇಳಿದನು–'ಈ ಅಣ್ಣ ಮತ್ತು ಅತ್ತಿಗೆಯಂತೆ ನಾವುಗಳೂ ಸಹ ಪ್ರತಿದಿನವೂ ನಿಯಮವಾಗಿ ಗೀತಾಪಠಣ ಮಾಡೋಣ.'

ಗೀತಾನುಸಾರ ಜೀವನ ರೂಪಿಸಿಕೊಳ್ಳಲು ಪೂರ್ಣ ಪ್ರಯತ್ನ ಮಾಡೋಣ'– ಎಲ್ಲರಿಗಿಂತ ಚಿಕ್ಕವನು ಹೇಳಿದನು 'ಆಗ ನಮ್ಮ ಮನೆ ಭಗವಂತನ ಮಂದಿರ ಆಗಿಹೋಗುವುದು'– ಎರಡನೇ ತಮ್ಮನು ಹೇಳಿದನು.

'ಭಗವಂತನುಮಾಡಿದಂತೆಯೇ ಆಗಲಿ'–ನಸುನಗುತ್ತಾ ಗೀತಾಭ್ಯಾಸಿ ಎಲ್ಲರಿಗಿತ ಹಿರಿಯವನಾದ ಅಣ್ಣನು ಹೇಳಿದನು.

(ನಿವೃತ್ತಿ ಪರ ಸ್ವಭಾವದ ಅನುಸರಣೆ ಮಾಡಿ ಈ ಕಥೆ ಬರೆಯಲಾಗಿದೆ. ಈ ಶ್ಲೋಕದ ಅರ್ಥ ಪ್ರವೃತ್ತಿಪರವೂ ಆಗುತ್ತದೆ ಮತ್ತು ಹೀಗೆ ಪ್ರತ್ಯೇಕ ಕರ್ಮಶೀಲ ಭಕ್ತನಿಗೂ ಈ ಶ್ಲೋಕ ಆದರ್ಶವಾಗಿದೆ).

❑❑❑

# ೯. ಪರಮಾನಂದದ ಕೃಷಿ

'ಅಣ್ಣಾ! ಇಷ್ಟು ದೂರ ಬಂದದ್ದೇನು?' ಸ್ವಾಗತಿಸಿದ ನಂತರ ಪಂಜಾಬ್ ನಿವಾಸೀ ಮಿತ್ರನು ಕೇಳಿದನು. ರಾಜಸ್ಥಾನದಿಂದ ಪಂಜಾಬ್‌ಗೆ ಬರಲು ಯಾವುದೇ ವಿಶೇಷ ಕಾರಣ ಖಂಡಿತ ಇರಬೇಕು ಎಂದು ಅವನು ತಿಳಿದುಕೊಂಡಿದ್ದನು.

'ನಮ್ಮ ಪ್ರದೇಶದಲ್ಲಿ ಬರಗಾಲ ಉಂಟಾಗಿದೆ. ಜನರು ಹೊಟ್ಟೆಗಿಲ್ಲದೆ ಕಷ್ಟಪಡುತ್ತಿದ್ದಾರೆ ಮತ್ತು ಎಷ್ಟೋ ಮಂದಿ ಹೊಟ್ಟೆಗಿಲ್ಲದೆ ಹಸಿವೆಯಿಂದ ಒದ್ದಾಡುತ್ತಾ ಪ್ರಾಣ ಬಿಡುತ್ತಿದ್ದಾರೆ. ವ್ಯಾಕುಲಗೊಂಡ ನಾನು ಪರಿವಾರಸಹಿತ ನಿಮ್ಮ ಬಳಿಗೆ ಬಂದು ಬಿಟ್ಟೆನು. ರಾಜಸ್ಥಾನದ ವೈಶ್ಯನು ತನ್ನ ಮಿತ್ರನಿಗೆ ಸತ್ಯಸಂಗತಿಯನ್ನು ತಿಳಿಸಿದನು. ತನ್ನ ಮಿತ್ರನ ಹತ್ತಿರ ದವಸ ಧಾನ್ಯಗಳ ರಾಶಿಯಿರುವುದನ್ನು ಕಂಡು ಅವನು ಮನಸ್ಸಿನಲ್ಲಿಯೇ ಸಂತೋಷಪಡುತ್ತಿದ್ದನು.

'ನೀವು ಇಲ್ಲಿಗೆ ಬಂದದ್ದು ಬಹಳ ಒಳ್ಳೆಯದೇ ಆಯಿತು. ನಿಮ್ಮ ಮನೆಯೆಂದೇ ತಿಳಿದುಕೊಂಡು ಸಂತೋಷವಾಗಿರಿ'-ವೈಶ್ಯನು ಬಹಳ ಪ್ರೇಮದಿಂದ ಹೇಳಿದನು.

'ನಿಮ್ಮ ಹತ್ತಿರ ದವಸ-ಧಾನ್ಯಗಳ ರಾಶಿಯೇ ಇದೆ. ನಮ್ಮ ರಾಜ್ಯದಲ್ಲಾದರೋ ದವಸ-ಧಾನ್ಯ ಈಗ ಭಾಗ್ಯಶಾಲಿಯಾದವನಿಗೇ ದೊರೆಯುತ್ತದೆ, ಅಲ್ಲಾದರೋ ಒಂದೊಂದು ಕೂಳಿಗೂ ಹದ್ದು ಕಾಗೆಗಳಂತೆ ಕಿತ್ತಾಟ ನಡೆಯುತ್ತಿದೆ. ನಿಮ್ಮಲ್ಲಿ ಸಾವಿರಾರು ಮಣ ರಾಶಿ ರಾಶಿ ಕೂಡಿರುವುದನ್ನು ನೋಡಿ ನನಗೆ ಹೋದ ಪ್ರಾಣ ಬಂದಂತಾಯಿತು ಎಂದು ರಾಜಾಸ್ಥಾನದ ಮಿತ್ರನು ಹೇಳಿದನು.

'ಇಲ್ಲಿಯೇನೂ ಭಗವತ್ಕೃಪೆಯಿಂದ ಆಹಾರ ಧಾನ್ಯಕ್ಕೆ ಅಭಾವವಿರಲಿಲ್ಲ. ಇದರಲ್ಲಿ ಆಶ್ಚರ್ಯವಾಗುವಂತಹ ಮಾತೇನಿಲ್ಲ. ಇಲ್ಲಿಗೆ ಯಾರೇ ಬರಲಿ, ಅವರಿಗೆ ಆಹಾರದ ಕೊರತೆಯೇನೂ ಇಲ್ಲ. ನೀವು ನಮ್ಮ ಮಿತ್ರರು, ಇಲ್ಲಿ ಎಲ್ಲವೂ ನಿಮ್ಮದೇ. ಇಲ್ಲಿಗೆ ಬಂದು ನೀವು ಬಹಳ ಒಳ್ಳೆಯದನ್ನೇ ಮಾಡಿದಿರಿ'-ಮಿತ್ರನು ಹೇಳಿದನು. ಅವನು ಚತುರ ಮತ್ತು ಅನುಭವೀ ರೈತನಾಗಿದ್ದನು.

'ನಿಮ್ಮೆಲ್ಲಾ ವಸ್ತುಗಳೂ ನಮ್ಮದೇ ಆಗಿವೆ, ಇದರಲ್ಲಿ ಸಂದೇಹವೇನೂ ಇಲ್ಲ. ಆದರೆ ಇಷ್ಟೊಂದು ಧಾನ್ಯದ ರಾಶಿ ನಿಮ್ಮ ಹತ್ತಿರಕ್ಕೆ ಹೇಗೆ ಬಂತು? ಎಂಬುದನ್ನು ನಾನು ತಿಳಿದುಕೊಳ್ಳಬೇಕೆನಿಸುತ್ತದೆ ಆ ಮಿತ್ರನು ಆಶ್ಚರ್ಯದಿಂದ ಕೇಳಿದನು.

'ನಮ್ಮ ಕಡೆಯಲ್ಲಿ ಸರಿಯಾಗಿ ವ್ಯವಸಾಯ ನಡೆಯುತ್ತದೆ. ಅದರ ಪ್ರತಾಪವೇ ಇದು'-ರೈತ ಮಿತ್ರನು ವೈಶ್ಯ ಬಂಧುವಿಗೆ ಸಮಾಧಾನವಾಗಿ ಹೇಳಿ 'ನೀವೂ ಸಹ ವ್ಯವಸಾಯ ಮಾಡಲು ತೊಡಗಿದರೆ ನಿಮ್ಮ ಹತ್ತಿರವೂ ಸಹ ಆಹಾರ ಧಾನ್ಯದ ರಾಶಿ ಉಂಟಾಗುವುದು.'

ಬಹಳ ಒಳ್ಳೆಯ ಮಾತು. ಕೃಷಿಯ ಕಾರ್ಯದಲ್ಲಿ ನಾನೂ ಸಹ ತೊಡಗುವೆನು ಆದರೆ ಅದರ ಅನುಭವ ನನಗಿಲ್ಲ, ನನ್ನ ಹತ್ತಿರ ಐದು ಸಾವಿರ ರೂಪಾಯಿಗಳಿವೆ, ಇಷ್ಟರಿಂದ ಕೃಷಿಯನ್ನು ಪ್ರಾರಂಭಿಸಲು ಸಾಕಾಗುವುದೇನು? ವೈಶ್ಯ ಮಿತ್ರನು ಪ್ರಶ್ನಿಸಿದನು.

'ಐದು ಸಾವಿರವೇನೂ ಕಡಿಮೆ ಬಂಡವಾಳವಲ್ಲ. ಅಷ್ಟು ಹಣದಿಂದ ನೀವು ಕೃಷಿ ಕೆಲಸವನ್ನು ಬಹಳ ಚೆನ್ನಾಗಿ ಪ್ರಾರಂಭಿಸಬಹುದು. ನನ್ನ ಸಹಯೋಗ ಪೂರ್ಣವಾಗಿ ಇದ್ದೇ ಇರುವುದು. ರೈತ ಮಿತ್ರನು ಸಹಾನುಭೂತಿಯ ಶಬ್ದಗಳ ಮೂಲಕ ತನ್ನ ವೈಶ್ಯಮಿತ್ರನಿಗೆ ಹೇಳಿದನು.

ನನಗೇನೂ ಇದರ ಯಾವ ಜ್ಞಾನವೂ ಇಲ್ಲ. ನೀವು ಉಚಿತವೆಂದು ತಿಳಿದಂತೆ ಮಾಡಿ ಎಂದು ತನ್ನಲ್ಲಿದ್ದ ಬಂಡವಾಳವನ್ನೆಲ್ಲಾ ರೈತನಿಗೆ ಸಮರ್ಪಿಸುತ್ತಾ ವೈಶ್ಯನು ಉತ್ತರವಿತ್ತನು.

ನೋಡಿ, ಈ ಗೋಧಿಯೆಲ್ಲಾ ಮಣ್ಣಿನಲ್ಲಿ ಸೇರಿ ಹೋದವು. ಗೋಧಿಯ ಒಂದೊಂದು ಕಾಳೂ ಅಂಕುರಿಸಿ ಹಾಳಾಗಿ ಹೋದುವುದ. ಅತ್ಯಂತ ನಿರಾಶನಾಗಿ ವೈಶ್ಯನು ಹೇಳಿದನು. ಅವನು ಪಂಜಾಬೀ ರೈತ ಮಿತ್ರನ ಯಾವ ಕೆಲಸಕ್ಕೂ ಅಡ್ಡಿಯುಂಟು ಮಾಡಿರಲಿಲ್ಲ. ರೈತನು ಮಿತ್ರನ ಬಂಡವಾಳದಿಂದ ಬೀಜಾದಿಗಳ ವ್ಯವಸ್ಥೆ ಮಾಡಿಸಿ ಉಳುಮೆ ಮಾಡಿಸಿದ್ದನು. ಬೀಜ ಬಿತ್ತಲ್ಪಟ್ಟಿದ್ದಿತು. ಆದರೆ ಅನನುಭವೀ ವೈಶ್ಯನು ಇದೆಲ್ಲವನ್ನೂ ನೋಡಿ ಚಿಂತೆಯಿಂದ ಯೋಚನಾಪರನಾಗಿರುತ್ತಿದ್ದನು. ಎರಡು– ಮೂರು ದಿನಗಳಿನ್ನೂ ಕಳೆದಿರಲಿಲ್ಲ. ಅವನು ಹೊಲಕ್ಕೆ ಹೋಗಿ ಕೆದಕಿ ಗೋಧಿಯ ಕಾಳುಗಳನ್ನು ನೋಡಿದನು. ಅವನಿಗೆ ಬಹಳಷ್ಟು ಬೀಜಗಳು ಮೊಳೆತಿರುವುದು ಕಂಡಿತು.

'ನಿಮ್ಮ ಹೊಲದಲ್ಲಿ ಮೊಳಕೆ ಬರುವುದಕ್ಕೆ ಪ್ರಾರಂಭವಾಗಿದೆ. ನೀವು ಯಾವ ಚಿಂತೆಯನ್ನೂ ಮಾಡಬಾರದು. ಬೀಜದ ಲಕ್ಷಣ ಚೆನ್ನಾಗಿದೆ. ನಿಮಗೆ ಗೊತ್ತಿಲ್ಲ.' ರೈತ ಮಿತ್ರನು ವೈಶ್ಯನಿಗೆ ಭರವಸೆಯಿತ್ತನು.

'ಹಣ ಮತ್ತು ಶ್ರಮವನ್ನೂ ಖರ್ಚು ಮಾಡಿದಾಗ್ಯೂ ಸಹ ಯಾವ ಲಾಭವೂ ಕಂಡುಬರುತ್ತಾ ಇಲ್ಲ. ನನಗೆ ಬಹಳ ಚಿಂತೆಯಾಗಿ ಹೋಗಿದೆ. ವೈಶ್ಯನು ಮನಸ್ಸಿನ ವ್ಯಥೆಯನ್ನು ಸ್ಪಷ್ಟವಾಗಿ ಹೇಳಿಬಿಟ್ಟನು.

'ಪ್ರಾರಂಭದಲ್ಲಿ ಹಾಗೆಯೇ ಆಗುತ್ತದೆ. ನೀವು ನಿಶ್ಚಿಂತರಾಗಿರಿ. ನಿಮ್ಮ ಹೊಲ ಬಹಳ ಸುಂದರವಾಗುತ್ತಾ ಇದೆ.' ರೈತ ಮಿತ್ರನು ಬಹಳ ಪ್ರೀತಿಯಿಂದ ಹೇಳಿದನು. ವೈಶ್ಯನು ಸುಮ್ಮನಿದ್ದನು, ಇಷ್ಟಲ್ಲದೆ ಅವನ ಕೈಲಿನ್ನೇನಾಗುತ್ತಿತ್ತು.

'ನನ್ನ ಹೊಲದಲ್ಲಿ ಎಲ್ಲೆಲ್ಲಿಯೂ ಹುಲ್ಲೇ-ಹುಲ್ಲು ಕಾಣುತ್ತಾ ಇದೆ. ನನಗೆ ಬಹಳ ಹಾನಿಯಾಗಿ ಹೋಯ್ತು. ನನ್ನ ಹಣವೆಲ್ಲಾ ವ್ಯರ್ಥವಾಗಿ ಹೋಯಿತು' -ವೈಶ್ಯನು ಕೆಲವೇ ದಿನಗಳಲ್ಲಿ ಪುನಃ ರೈತನಿಗೆ ಹೇಳಿದನು. ಗೇಣುದ್ದದ ಗೋಧಿಯ ಪೈರುಗಳನ್ನು ಅವನು ಹುಲ್ಲೆಂದು ತಿಳಿದುಕೊಂಡಿದ್ದನು.

ಗಾಬರಿಗೊಂಡ ರೈತನು ತಾನೇ ಹೊಲಕ್ಕೆ ಹೋಗಿ ಅಲ್ಲಿ ನೋಡಿದಾಗ ಅವನಿಗೆ ಬಹಳ ಸಂತೋಷವಾಯಿತು.

'ನಿಮ್ಮ ಹೊಲವು ಅಕ್ಕಪಕ್ಕದವರೆಲ್ಲರ ಹೊಲಕ್ಕಿಂತಲೂ ಉತ್ಕೃಷ್ಟವಾಗಿದೆ. ರೈತನು ನಿರಾಶನಾಗಿದ್ದ ಮಿತ್ರನ ಭ್ರಮೆಯನ್ನು ನಿವಾರಿಸಿದನು. ಇನ್ನು ಗೋಧಿಯ ವಿಶಾಲವಾದ ರಾಶಿ ನಿಮ್ಮ ಹತ್ತಿರ ಬಂದು ಸೇರುವುದರಲ್ಲಿ ಸಂಶಯವಿಲ್ಲ. ಆದರೆ ಪೈರು ಒಣಗದಂತೆ ಹೆಚ್ಚು ಗಮನವಿಟ್ಟುಕೊಳ್ಳಬೇಕು. ಈ ಕೋಮಲವಾದ ಪೈರುಗಳ ಜೀವನ ನೀರು. ಇದಕ್ಕೆ ವ್ಯವಸ್ಥೆಯನ್ನು ನೀವು ಬೇಗ ಮಾಡಿಕೊಳ್ಳುವುದು. ಇವುಗಳಿಗೆ ನೀರು ಹಾಯಿಸಲು ನೀವು ಬೇಗ ಒಂದು ಬಾವಿಯನ್ನು ತೆಗೆಸಿ ಜೊತೆಗೆ ಹೊಲದ ಸುತ್ತಲೂ ಮುಳ್ಳಿನ ಬೇಲಿ ಹಾಕಿಸಿ ತಡೆಮಾಡಿಸಿ. ಇಲ್ಲದಿದ್ದರೆ ದನ ಕರುಗಳು ಬಂದು ಇದನ್ನು ತಿಂದು ಹಾಕುವುವು. ನೀವು ಎಚ್ಚರಿಕೆಯಿಂದ ಹೊಲದ ರಕ್ಷಣೆ ಮಾಡಬೇಕಾಗುವುದು.

ನಿಮ್ಮ ಪ್ರತಿಯೊಂದು ಆಜ್ಞೆಯನ್ನೂ ನಾನು ಶಬ್ದಶಃ ಪಾಲಿಸುವೆನು ಎಂದು ವೈಶ್ಯನುಹೇಳಿದನು ಮತ್ತು ಹಾಗೆಯೇ ಮಾಡಿದನು. ಬಾವಿಯನ್ನು ತೆಗೆಸಿ ಚೆನ್ನಾಗಿ ನೀರು ಹಾಯಿಸಿದನು. ಭಗವತ್ಕೃಪೆಯಿಂದ ಮಧ್ಯೆ-ಮಧ್ಯೆ ಮಳೆ ಬಂದು ನೀರು ಹಾಯಿತು. ಬೆಳೆ ವೃದ್ಧಿಯಾಯಿತು.

ಹೊಲದಲ್ಲಿ ಒಂದೂ ಸಹ ಕಳೆಯಿಲ್ಲದಂತೆ ಕಳೆ ತೆಗೆಸಿಹಾಕು. ಅವು ಗೋಧಿಯ ಹುಲುಸಿಗೆ ಬಾಧಕವಾಗಿವೆ'-ಎಂದು ಒಂದು ದಿವಸ ಹೊಲದ ಬಳಿಗೆ ರೈತನು ವೈಶ್ಯನಿಗೆ ಪ್ರೀತಿಯ ಮಾತಿನಲ್ಲಿ ತಿಳಿಸಿದನು

‘ಒಂದು ಹುಲ್ಲು ಸಹ ಹೊಲದಲ್ಲಿ ಇಲ್ಲದಂತೆ ಮಾಡಿಸಿಬಿಡುವೆನು’ ವೈಶ್ಯನು ತಕ್ಷಣ ಉತ್ಸಾಹಪೂರ್ಣ ಶಬ್ದದಿಂದ ಉತ್ತರವಿತ್ತನು.

‘ಗೋಧಿಯ ಕಾಳುಗಳೇನೊ ಆಯಿತು. ಆದರೆ ಇವು ಎಲ್ಲವೂ ಹಸಿಯದಾಗಿಯೇ ಇವೆ’–ಹಣೆಯಲ್ಲಿನ ಬೆವರನ್ನು ಒರೆಸಿಕೊಳ್ಳುತ್ತಾ ವೈಶ್ಯನು ರೈತಬಂಧುವಿಗೆ ಹೇಳಿದನು. ಅವನು ಹೊಲದಿಂದ ಓಡುತ್ತಾ ಬಂದು ಗಟ್ಟಿಯಾಗಿ ಏದುಸಿರು ಬಿಡುತ್ತಾ ಇದ್ದನು. ಅವನು ತನ್ನ ರೈತ ಮಿತ್ರನ ಆದೇಶದಂತೆ ತನ್ನ ಹೊಲದಲ್ಲಿ ಹುಲ್ಲಿನ (ಕಳೆ) ಯಾವ ಚಿಹ್ನೆಯೂ ಸಹ ಉಳಿಯದಂತೆ ಮಾಡಿದ್ದನು. ಅವನ ಪರಿಶ್ರಮ ಅಸಮಾನವಾಗಿತ್ತು. ಗೋಧಿಯ ಫಸಲು ಹೆಚ್ಚಿತ್ತು. ಆದರೆ ಇಷ್ಟು ದಿವಸಗಳ ನಂತರ ಅವನು ನೋಡಿದಾಗ ಫಸಲೆಲ್ಲಾ ಹಸಿಯದಾಗೇ ಇತ್ತು. ಕೃಷಿ–ಜ್ಞಾನದಿಂದ ಶೂನ್ಯವಾದ ಕಾರಣ ಆ ಬಡಪಾಯಿ ಗಾಬರಿಯಾಗಿದ್ದನು. ಹಣದ ಜೊತೆಗೆ ನನ್ನ ಉತ್ತಮ ಪರಿಶ್ರಮವೂ ಸಹ ವ್ಯಥವಾಗುತ್ತಾ ಇದೆ. ಅವನು ಜೊತೆಯಲ್ಲಿಯೇ ತೆಗೆದುಕೊಂಡು ಬಂದಿದ್ದ ಮೂರು–ನಾಲ್ಕು ತೆನೆಗಳನ್ನೂ ಸಹ ರೈತನ ಮುಂದಿಡುತ್ತಾ ತೋರಿಸಿದನು.

‘ನಿಮ್ಮ ಗೋಧಿಯ ಕಾಳುಗಳು ಬಹಳ ಪುಷ್ಟವಾಗಿವೆ. ಇವು ಈಗ ಬೇಗ ಪಕ್ವವಾಗುತ್ತವೆ. ಈಗ ಇದಕ್ಕೆ ತಡವೇನೂ ಆಗದು. ನೀವು ಗಾಬರಿಯಾಗಬಾರದು, ಯಾವ ಯೋಚನೆಯನ್ನೂ ಮಾಡಬಾರದು. ನಿಮ್ಮ ಮನೆಯಲ್ಲಿ ಗೋಧಿ ಮತ್ತು ಹೊಟ್ಟಿನ ಗುಡ್ಡೆ ಬೆಟ್ಟದಂತೆ ಬೀಳುವುದು, ಸಂತೋಷ ಪಡುತ್ತಾ ರೈತ ವೈಶ್ಯನಿಗೆ ಹೇಳಿದನು. ಆದರೆ ಇಂತಹ ಸಮಯದಲ್ಲಿ ಪಕ್ಷಿಗಳು ಬಂದು ಬಂದು ಮಧುರವಾಗಿ ಕಲರವ ಮಾಡುತ್ತಾ ಕಾಳುಗಳನ್ನೆಲ್ಲಾ ತಿಂದು ಹೋಗುತ್ತವೆ. ಆದುದರಿಂದ ಹೊಲವನ್ನು ಚೆನ್ನಾಗಿರಕ್ಷಿಸಬೇಕಾಗುವುದು. ಇಲ್ಲದಿದ್ದರೆ ಪಕ್ಷಿಗಳು ಹೊಲವನ್ನೆಲ್ಲಾ ನಾಶಮಾಡಿ ಬಿಡುವುವು.’

‘ನಾನು ನಿಮಗೆ ಕೃತಜ್ಞನಾಗಿದ್ದೇನೆ. ನನಗೆ ಅಪಾರ ಆನಂದವಾಗಿದೆ. ನನ್ನ ಬಳಿ ಗೋಧಿಯ ವಿಶಾಲವಾದ ರಾಶಿಯುಂಟಾಗಿದೆ. ವೈಶ್ಯನು ಆನಂದದಿಂದ ರೈತ ಮಿತ್ರನಿಗೆ ಕೃತಜ್ಞತೆಯನ್ನು ಸಲ್ಲಿಸಿದನು.

'ಇದೆಲ್ಲವೂ ಭಗವಂತನ ಕೃಪೆ ಮತ್ತು ನಿಮ್ಮ ಶ್ರಮದ ಫಲ. ನೀವು ಪಕ್ಷಿಗಳ ಕಲರವಕ್ಕೆ ಗಮನಕೊಡದೆ, ಅವುಗಳನ್ನು ಓಡಿಸುವುದರಲ್ಲಿ ನಿರತರಾಗಿರುತ್ತಿದ್ದೀರಿ. ನೀವು ಬಹಳ ತತ್ಪರತೆಯಿಂದ ವ್ಯವಸಾಯ ಮಾಡಿದ್ದೀರಿ' ರೈತನು ವೈಶ್ಯ ಬಂಧುವಿಗೇ ಕೀರ್ತಿ ತಂದನು. ವೈಶ್ಯನು ತಲೆಬಾಗಿ ನಿಂತನು. ಅವನ ಆಕೃತಿಯಲ್ಲಿ ಆನಂದ ಹೊರಹೊಮ್ಮುತ್ತಿತ್ತು.

ಈ ಕಥೆಯು ಒಂದು ದೃಷ್ಟಾಂತ ರೂಪದಲ್ಲಿ ಹೇಳಲ್ಪಟ್ಟಿದೆ. ಇದನ್ನು ಪರಮಾರ್ಥ ವಿಷಯದಲ್ಲಿ ಈ ಪ್ರಕಾರ ಹೊಂದಿಸಿಕೊಳ್ಳಬೇಕು. ನಿಜವಾದ ಸುಖ ಪ್ರಾಪ್ತಿಗಾಗಿ ಸಾಧನೆ ಮಾಡುವ ಜಿಜ್ಞಾಸುವು ಇಲ್ಲಿ ಬರಗಾಲ ಪೀಡಿತ ವೈಶ್ಯನೆಂದು ತಿಳಿದುಕೊಳ್ಳಬೇಕು. ಸಾಧಕನ ಸಾಂಸಾರಿಕ ಕಷ್ಟಗಳ ಜ್ವಾಲೆಯಿಂದ ಉತ್ಪತ್ತಿಯಾದ ಸತ್ಯವಾದ ಸುಖದ ಅಭಿಲಾಷೆಯನ್ನು ಬರಗಾಲ ಪೀಡಿತ ವೈಶ್ಯನ ಹಸಿವಿನ ಜ್ವಾಲೆಯ ಕಾರಣ ಆಹಾರದ ಆವಶ್ಯಕತೆಯೆಂದು ತಿಳಿದುಕೊಳ್ಳಬೇಕು. ಪಂಜಾಬಿನಲ್ಲಿರುವ ರೈತ ಮಿತ್ರನನ್ನು ಮಹಾತ್ಮನೆಂದು ತಿಳಿದುಕೊಳ್ಳಬೇಕು. ವೈಶ್ಯನು ರಾಜಾಸ್ಥಾನದಿಂದ ತನ್ನ ಮಿತ್ರನ ಬಳಿಗೆ ಪಂಜಾಬಿಗೆ ಬರುವುದೇನಿದೆ, ಅದು ಸಾಧಕನು ತನ್ನ ಮನೆಯಿಂದ ಮಹಾತ್ಮರ ಆಶ್ರಮದಲ್ಲಿ ಅವರ ಹತ್ತಿರ ಹೋಗುವುದು. ಮಿತ್ರನ ಹತ್ತಿರಕ್ಕೆ ಹೋಗಿ ವೈಶ್ಯನು ತನ್ನ ಕಷ್ಟವನ್ನು ಹೇಳಿಕೊಳ್ಳುವುದೇ, ಇಲ್ಲಿ ಜಿಜ್ಞಾಸುವಾದ ಸಾಧಕನು ಮಹಾತ್ಮರಿಗೆ ತನ್ನ ದುಃಖವನ್ನು ಅರಿಕೆಮಾಡಿಕೊಳ್ಳುವುದು. ವೈಶ್ಯನು ತನ್ನ ಬಂಡವಾಳವನ್ನೆಲ್ಲಾ ಪೂರ್ತಿಯಾಗಿ ಮಿತ್ರನಿಗೆ ವಹಿಸಿಕೊಡುವುದೇ, ಇಲ್ಲಿ ಸಾಧಕನು ತನ್ನ ಮಾನವ ಜೀವನದ ಉಳಿದಿರುವ ಸಮಯವನ್ನು ಮಹಾತ್ಮರ ಪಾದಗಳಲ್ಲಿ ಸಮರ್ಪಿಸುವುದು. ಮಿತ್ರನು ಹೇಳಿದ ಪ್ರಕಾರ ಹಣವನ್ನು ಖರ್ಚು ಮಾಡುವುದೇ, ಇಲ್ಲಿ ಮಹಾತ್ಮರ ಆಜ್ಞಾನುಸಾರ ಸಮಯದ ಸದುಪಯೋಗ ಮಾಡಿಕೊಳ್ಳುವುದು. ರೈತ ಮಿತ್ರನು ಭೂಮಿ ಮತ್ತು ಬೀಜದ ವ್ಯವಸ್ಥೆ ಮಾಡಿಸಿಕೊಡುವುದನ್ನು ಮಹಾತ್ಮರು ಸಮಯವನ್ನು ಸದುಪಯೋಗ ಪಡಿಸಿಕೊಳ್ಳಲು ಕಲಿಸುವುದು ಎಂದು ತಿಳಿದು ಕೊಳ್ಳಬೇಕು. ಕೃಷಿಗಾಗಿ ತನ್ನ ಸುಖವನ್ನು ತ್ಯಾಗ ಮಾಡುವುದೇ, ಇಲ್ಲಿ ಪರಮಾನಂದದ ಪ್ರಾಪ್ತಿಗಾಗಿ ಈಗಿನ ಸಾಂಸಾರಿಕ ಸುಖ ಭೋಗಗಳ ತ್ಯಾಗವೆಂದು ತಿಳಿದುಕೊಳ್ಳಬೇಕು. ಹೊಲದಲ್ಲಿ ಬೀಜ ಬಿತ್ತುವುದೇನಿದೆ, ಅದನ್ನು ಮಹಾತ್ಮರ ಮೂಲಕ ಸಾಧನೆಯ

ಬೀಜ-ಮಂತ್ರವನ್ನು ಹೃದಯಂಗಮ ಮಾಡಿಕೊಳ್ಳುವುದು ಎಂದು ತಿಳಿಯಬೇಕು. ವ್ಯವಸಾಯದಿಂದ ಹೊಲದಲ್ಲಿ ಬೀಜಗಳು ಮೊಳೆತಾಗ ತಿಳುವಳಿಕೆಯಿಲ್ಲದ ಕಾರಣ ದುಃಖ ಮತ್ತು ನಿರಾಶೆಯಾಗುವುದನ್ನು, ಸಾಧನ ಕಾಲದಲ್ಲಿ ಉಂಟಾಗುವ ನಿರಾಶೆ ಮತ್ತು ಅದರಿಂದಾಗುವ ದುಃಖ ಎಂದು ತಿಳಿದುಕೊಳ್ಳಬೇಕು. ವೈಶ್ಯನು ಭ್ರಮೆಯಿಂದ ಗೋಧಿಯ ಚಿಕ್ಕ ಪೈರನ್ನು ಹುಲ್ಲೆಂದು ತಿಳಿದುಕೊಳ್ಳುವುದೇ, ಇಲ್ಲಿ ಸಾಧನ ಕಾಲದಲ್ಲಿ ಸಾಧನೆಯು ಉನ್ನತಿಯಾದರೂ ಸಾಧನೆಯಲ್ಲಿ ಪರಿಶ್ರಮ ಹೆಚ್ಚಾದುದರಿಂದ ಅದನ್ನು ಭ್ರಮೆಯಿಂದ ಸಾಧನೆಯೆಂದು ತಿಳಿದುಕೊಳ್ಳದೆ ವ್ಯರ್ಥವಾಯಿತೆಂದು ತಿಳಿದುಕೊಳ್ಳುವುದು. ಮನಸ್ಸು ಮತ್ತು ಇಂದ್ರಿಯಗಳ ಸಂಯಮವನ್ನು ಬೇಲಿಯೆಂದು ತಿಳಿಯಬೇಕು. ಆಧ್ಯಾತ್ಮ ವಿಷಯವನ್ನು ಸಾಂಸಾರಿಕ ಸ್ವಾರ್ಥೀ ಮನುಷ್ಯರ ಸಂಪರ್ಕದಲ್ಲಿ ಖರ್ಚುಮಾಡದಿರುವುದೇ ದನ ಕರುಗಳಿಂದ ಹೊಲವನ್ನು ರಕ್ಷಿಸುವುದು. ಭಗವಂತನ ಗುಣ ಪ್ರಭಾವಗಳ ಸಹಿತ ರೂಪದ ನೆನಪು ಮತ್ತು ಸತ್ಸಂಗ ಸ್ವಾಧ್ಯಾಯವನ್ನು, ಬಾವಿ ತೆಗೆಸಿ ಹೊಲಕ್ಕೆ ನೀರು ಹಾಯಿಸುತ್ತಿರುವುದು ಎಂದು ತಿಳಿದುಕೊಳ್ಳಬೇಕು. ತಾನೇ ತಾನಾಗಿ ಸತ್ಸಂಗ ದೊರೆಯುವುದು ಮತ್ತು ಧ್ಯಾನದ ಅಭ್ಯಾಸ ನಡೆಯುವುದನ್ನೂ, ಈಶ್ವರನ ಕೃಪೆಯಿಂದ ಸಕಾಲದಲ್ಲಿ ಸ್ವತಃ ಮಳೆಬೀಳುವುದು ಎಂದು ತಿಳಿಯಬೇಕು. ದುರ್ಗುಣ ಮತ್ತು ದುರಾಚಾರಗಳನ್ನು ತನ್ನ ಹೃದಯದಿಂದ ಹೊರದೂಡುತ್ತಿರುವುದೇ, ಇಲ್ಲಿ ಕಳೆತೆಗೆದು ಹಾಕುತ್ತಿರುವುದು. ಪರಮಾತ್ಮನ ಧ್ಯಾನದ ಸ್ಥಿರತೆಯನ್ನೂ, ಇಲ್ಲಿ ಗೋಧಿ ಫಲ ಕಚ್ಚುವಿಕೆ ಹಾಗೂ ಸ್ವಾರ್ಥಿಗಳಾದ ಮನುಷ್ಯರು ಮಾಡುವ ಸಾಧಕನ ಹೊಗಳಿಕೆ ಕೀತಿರ್ಯನ್ನು ಇಲ್ಲಿ ಗೋಧಿಯನ್ನು ತಿಂದುಹಾಕಲು ಬರುವ ಪಕ್ಷಿಗಳ ಮಧುರ ಕಲರವವೆಂದು ತಿಳಿದುಕೊಳ್ಳಬೇಕು. ಸಾಧನೆಯು ಪರಿಪಕ್ವವಾಗಲು ಹೊಗಳಿಕೆ ಕೀರ್ತಿಯನ್ನು ಮತ್ತು ಹೊಗಳಿಕೆ ಕೀರ್ತಿ ಮಾಡುವವರನ್ನು ತಿರಸ್ಕಾರ ಮಾಡುವುದೇ, ಇಲ್ಲಿ ಹೊಲದ ರಕ್ಷಣೆಗಾಗಿ ಪಕ್ಷಿಗಳನ್ನು ಓಡಿಸುವುದು ಎಂದು ತಿಳಿದುಕೊಳ್ಳಬೇಕೆ. ಸಕಲ ದುಃಖಗಳಿಂದ ಪಾರಾಗಿ ಪರಮಾನಂದ ಸ್ವರೂಪೀ ಪರಮಾತ್ಮನ ಸಾಕ್ಷಾತ್ಕಾರ ಪ್ರಾಪ್ತಿಯಾಗುವುದನ್ನು ಗೋಧಿ ಪಕ್ವವಾಗಿ ಹೋದ ಮೇಲೆ ಅದರ ರಾಶಿಯಾಗುವುದು ಎಂದು ತಿಳಿದುಕೊಳ್ಳಬೇಕು.

❑❑❑

# ೧೦. ಸಮತೆಯೇ ಅಮೃತ, ವಿಷಮತೆಯೇ ವಿಷ

ರಾಜಸ್ಥಾನದ ಒಂದು ಊರಿನಲ್ಲಿ ಅತ್ಯಂತ ಬಡವನಾದ ಒಬ್ಬ ವೈಶ್ಯನಿದ್ದನು. ಅಲ್ಲಿ ಒಂದು ಸಲ ಭಯಂಕರವಾದ ಬರಗಾಲ ಉಂಟಾಯಿತು. ಆಹಾರದ ಅಭಾವದಿಂದ ಜನ ಒದ್ದಾಡಿ ಸಾಯುತ್ತಿದ್ದರು. ಬಡ ವೈಶ್ಯನಿಗೂ ವಿಪತ್ತು ಒದಗಿತು. ಸ್ವಲ್ಪ ದಿನಗಳು ಅವನು ಹಾಗೂ-ಹೀಗೂ ಕಾಲ ಕಳೆದನು. ಕೊನೆಗೆ ಪರಿವಾರದ ಪೋಷಣೆಗೆ ಯಾವ ಉಪಾಯವೂ ಕಾಣಲಿಲ್ಲ. ಕೆಲವು ದಿನಗಳ ಮಟ್ಟಿಗೆ ಹೇಗೋ ಮನೆಯವರಿಗೆ ಒಂದು ವ್ಯವಸ್ಥೆ ಮಾಡಿ ಅವನು ಹೊರಟು ಹೋದನು. ಅವನಿಗೆ ಒಬ್ಬ ಬಾಲ್ಯ ಸ್ನೇಹಿತನಿದ್ದನು. ಅವನು ಅಸ್ಸಾಂನಲ್ಲಿ ವ್ಯಾಪಾರ ಮಾಡುತ್ತಿದ್ದನು. ಒಳ್ಳೆಯ ಧನಿಕನೂ ಆಗಿದ್ದನು, ವ್ಯಾಪಾರ ಬಹಳ ಚೆನ್ನಾಗಿ ನಡೆಯುತ್ತಿತ್ತು. ಈ ಬಡ ವೈಶ್ಯನಿಗೆ ಅವನ ಜ್ಞಾಪಕ ಬಂದಿತು ಮತ್ತು 'ಕಷ್ಟಕಾಲದಲ್ಲಿ ಸದ್ಗುಣವೇ ಸ್ನೇಹ' - ಮಿತ್ರನ ಈ ಲಕ್ಷಣವನ್ನು ಯೋಚಿಸಿ ಅವನು ಹೇಗೋ ಅಸ್ಸಾಂಗೆ ಹೋಗಿ ಸೇರಿದನು. ಮಿತ್ರನಿದ್ದೆಡೆಗೆ ಹೋಗಿ ಅವನನ್ನು ಕಂಡನು. ಮಿತ್ರನ ಬಳಿ ಪ್ರೀತಿ ದೊರೆಯುವುದು ಮತ್ತು ದುಃಖದ ದಿನಗಳು ಒಳ್ಳೆಯ ರೀತಿಯಲ್ಲಿ ಕಳೆದುಹೋಗುವುವು ಎಂಬ ಪೂರ್ಣ ಭರವಸೆ ಅವನಿಗಿತ್ತು. ಮಿತ್ರನು ಅವನನ್ನು ಸ್ವಾಗತಿಸಿದನು, ಆದರೆ ಅವನ ಮುಖದಲ್ಲಿ ಪ್ರಸನ್ನತೆಗೆ ಪ್ರತಿಯಾಗಿ ಕೊಂಚ ಸಿಡುಕಿನ ಭಾವವೂ ಮತ್ತು ಸ್ವಲ್ಪ ಭಾರಸ್ವರೂಪವೋ ಎಂಬ ಚಿಹ್ನೆಗಳು ಕಂಡುಬಂದವು. ಬಡ ವೈಶ್ಯನಾದರೋ ಬಹಳ ದುಃಖಿಯಾಗಿದ್ದನು. ಅವನು ಸಂಕ್ಷೇಪವಾಗಿ ಬಹು ಕರುಣೆಯಿಂದ ತನ್ನೆಲ್ಲಾ ಕಥೆಯನ್ನೂ ತಿಳಿಸಿ ಆಶ್ರಯವನ್ನು ಬೇಡಿದನು. ಹೇಳಿದನು-'ಅಣ್ಣಾ! ಮನೆಯಲ್ಲಿ ನಿನ್ನ ಅತ್ತಿಗೆ ಮತ್ತು ಮಕ್ಕಳು ಹಸಿವಿನಿಂದ ಸಾಯುತ್ತಿರಬಹುದು, ಅವರಿಗೆ ಇಂದೇ ಸ್ವಲ್ಪ ಖರ್ಚಿಗಾಗಿ ಕಳುಹಿಸುವುದು ಅನಿವಾರ್ಯವಾಗಿದೆ. ಜೊತೆಗೆ ನನಗೂ ಸಹ ಏನಾದರೂ ಕೆಲಸದ ವ್ಯವಸ್ಥೆಯಾಗಬೇಕು, ಅದರಿಂದ ನನ್ನ ಈ ದುಃಖದ ದಿನ ಕಳೆದು ಹೋದಾವು ಮತ್ತು ಮಕ್ಕಳಿಗೆ ಪ್ರತಿತಿಂಗಳೂ ಸ್ವಲ್ಪ ಹಣ ಕಳುಹಿಸಿಕೊಡಬಹುದು.'

ಸಾಹುಕಾರ ಮಿತ್ರನು ದೀರ್ಘವಾದ ಉಸಿರೆಳೆದು ಹೇಳಿದನು-

'ಅಯ್ಯಾ ! ವಿಚಾರವೇನೋ ಸರಿಯೆ. ಈ ಸಮಯದಲ್ಲಿ ನಾನು ನಿನಗೆ ಅಲ್ಪಸ್ವಲ್ಪ ಸೇವೆ ಮಾಡಲೇಬೇಕು. ಆದರೆ ನಾನು ನಿನಗೆ ಏನಾದರೂ ಸಹಾಯ ಮಾಡುವಷ್ಟು ನನಗೆ ವರಮಾನವಿಲ್ಲ ಮತ್ತು ನಿನಗೆ ಕೊಡಲು ಈಗ ಯಾವ ಕೆಲಸವೂ ಕೂಡ ಇಲ್ಲ. ಮೂಲ ಬಂಡವಾಳದ ಬಡ್ಡಿಯಿಂದ, ಮನೆಗಳ ಬಾಡಿಗೆಯಿಂದ ಮತ್ತು ವ್ಯಾಪಾರದ ವರಮಾನದಿಂದ ಎಲ್ಲಾ ಸೇರಿ ನಲವತ್ತು-ಐವತ್ತು ಸಾವಿರ ರೂಪಾಯಿ ಬರಬಹುದು. ಈಗಿನ ಕಾಲ ಬಹಳ ತುಟ್ಟಿಯೆಂಬುದು ನಿನಗೂ ಗೊತ್ತು. ಆದರೂ ನನ್ನ ಮರ್ಯಾದೆಗನುಸಾರ ಖರ್ಚನ್ನೂ ಸಹ ಮಾಡಬೇಕಾಗುತ್ತದೆ. ಪರಿವಾರ, ಆಳುಗಳು ಗುಮಾಸ್ತರು ಎಲ್ಲಾ ಇದ್ದಾರೆ. ಕಷ್ಟದಿಂದ ಕೆಲಸ ನಡೆಯುತ್ತದೆ.ಅಂದ ಮೇಲೆ, ನಿಮ್ಮ ಪರಿವಾರದ ಪೋಷಣೆ ಮಾಡುವ ಶಕ್ತಿ ನನ್ನಲ್ಲಿ ಎಲ್ಲಿದೆ ನೀನೇ ಹೇಳು? ನನಗೆ ಬಹು ವ್ಯಥೆಯಾಗಿದೆ, ಆದರೆ ಈಗ ಏನೂ ಸಹ ನನ್ನಿಂದ ಆಗುವುದಿಲ್ಲವೆಂದು ವಿಧಿಯಿಲ್ಲದೆ ಹೇಳಬೇಕಾಗಿದೆ. ನೀನು ಬೇರೆಯಾವುದಾದರೂ ಮಾರ್ಗ ಯೋಚಿಸು.

ಕಡು ಬಡವನಾದ ವೈಶ್ಯನು ಖಿನ್ನನಾಗಿ ಹೇಳಿದನು-'ಅಯ್ಯಾ ಮಹಾಶಯ! ಇಲ್ಲಿ ನನಗೆ ಯಾರೂ ಗೊತ್ತಿಲ್ಲ, ಕೇವಲ ನಿನ್ನ ಭರವಸೆಯಿಂದ ಬಂದಿದ್ದೇನೆ. ಅಲ್ಲದೆ ನನ್ನ ಖರ್ಚಾದರೂ ಏನು ಮಹಾ. ಈಗ ನೂರು ರೂಪಾಯಿಗಳನ್ನು ರಾಜಸ್ಥಾನಕ್ಕೆ ಕಳಿಹಿಸಿ ಬಿಡು ಮತ್ತು ನೂರು ನೂರಿಪ್ಪತ್ತು ರೂಪಾಯಿಯಂತೆ ತಿಂಗಳ ಕೂಲಿ ಕೆಲಸ ನನಗೆ ಸಿಕ್ಕಿದರೆ ಸಾಕು ಕೆಲಸ ಆಗುತ್ತದೆ. ಸ್ವಲ್ಪ ನನಗೆ ಖರ್ಚಾಗುವುದು. ಉಳಿದುದನ್ನು ಮಕ್ಕಳಿಗಾಗಿ ಕಳುಹಿಸಿ ಕೊಡುವೆನು. ಸಾವಿರಾರು ರೂಪಾಯಿಗಳ ವರಮಾನವಿರುವಲ್ಲಿ ಇಷ್ಟು ಮಾತ್ರ ಖರ್ಚು ನಿನಗೆ ದೊಡ್ಡದೆಂದು ತಿಳಿಯಬಾರದು. ನಾನು ಕೆಲಸ ಮಾಡಿ ಕೂಲಿಯ ಹಣ ತೆಗೆದುಕೊಳ್ಳುತ್ತೇನೆ. ಹೀಗೆ ಹೇಳುತ್ತಾ ಹೇಳುತ್ತಾ ಅವನ ಕಣ್ಣುಗಳಲ್ಲಿ ಕಣ್ಣೀರು ತುಂಬಿತು. ಸ್ನೇಹಿತನ ನಿರಾಶಾಜನಕ ಮಾತುಗಳಿಂದ ಅವನಿಗೆ ಬಹಳ ಸಂತಾಪವಾಗುತ್ತಿತ್ತು. ಶ್ರೀಮಂತ ಮಿತ್ರನು ಅವನ ಮುಖದತ್ತ ನೋಡಿದನು, ಆದರೆ ಅವನಿಗೆ ಕನಿಕರವುಂಟಾಗಲಿಲ್ಲ, ಅವನು ಪುನಃ ಕಪಟ-ವಿನಯದಿಂದ ಅದನ್ನೇ ಹೇಳಿದನು-'ಅಯ್ಯಾ! ನೀನು

ಹೇಳುವುದೇನೋ ಸರಿಯಾಗಿದೆ, ಆದರೆ ನಾನು ನಿಸ್ಸಹಾಯಕನಾಗಿದ್ದೇನೆ. ನೀನು ಯಾವುದಾದರೂ ವ್ಯವಸ್ಥೆಯಾಗುವವರೆಗೆ ನಾಲ್ಕು ದಿನ ನೀನು ಇಲ್ಲಿಯೇ ಇರು. ಮನೆಯಲ್ಲಿ ಊಟ ಮಾಡಿಕೊಂಡಿರು. ಈಗ ಶೌಚ-ಸ್ನಾನಾದಿಗಳನ್ನು ಮಾಡು. ಅಡಿಗೆಯಾಗಿರಬೇಕು ಎಂದು ಹೇಳಿ ಆ ಶ್ರೀಮಂತ ಮಿತ್ರನು ತನ್ನ ಕೆಲಸದಲ್ಲಿ ನಿರತನಾದನು. ದೀನನಾದ ವೈಶ್ಯನು ಮನಸ್ಸಿನಲ್ಲಿ ಏನೇನೋ ಯೋಚಿಸುತ್ತಾ ಶೌಚ ಸ್ನಾನಾದಿಗಳಲ್ಲಿ ತೊಡಗಿದನು.

ಶ್ರೀಮಂತ ಮಿತ್ರನದು ಕಠೋರ ಮತ್ತು ಜಿಪುಣ ಸ್ವಭಾವಾಗಿತ್ತು. ಅವನ ಪತ್ನಿ ಅವನಿಗಿಂತಲೂ ಒಂದು ಕೈ ಮೇಲಾಗಿದ್ದಳು. ಆಕೆಗೆ ಬೇರೆ ಯಾರೂ ಹಿಡಿಸುತ್ತಿರಲಿಲ್ಲ. ಗಂಡನಾದರೋ ಸಜ್ಜನಿಕೆಗೆ ವಶನಾಗಿ ಒಮ್ಮೊಮ್ಮೆ ಸ್ವಲ್ಪ ಸಹಿಸಿಕೊಳ್ಳುತ್ತಿದ್ದನು. ಆದರೆ ಹೆಂಡತಿಯು ಗಂಡನನ್ನೂ ಗದರಿಸುತ್ತಿದ್ದಳು. ಮನೆಗೆ ಬಂದಿರುವ ಬಾಲ್ಯ ಸ್ನೇಹಿತನಿಗೆ ನಾಗರೀಕತೆಯ ದೃಷ್ಟಿಯಿಂದ ಊಟ ಮಾಡಿಸಲೇಬೇಕಾಗುವುದು. ಅವನು ಒಳಗಡೆ ಹೋಗಿ ಹೆಂಡತಿಗೆ ಹೇಳಿದನು-'ರಾಜಸ್ಥಾನದಿಂದ ನನ್ನ ಒಬ್ಬ ಹಳೆಯ ಮಿತ್ರ ಬಂದಿದ್ದಾನೆ. ಅವನಿಗೆ ಊಟ ಮಾಡಿಸಬೇಕು. ಸಾಧ್ಯವಾದಷ್ಟೂ ಅವನಿಗಾಗಿ ಒಳ್ಳೆಯ ಪದಾರ್ಥ ತಯಾರಿಸಿ ಪ್ರೀತಿಯಿಂದ ಬಡಿಸಬೇಕು, ಮಿತ್ರ ಜೊತೆಗೆ ಅತಿಥಿ, ಪರಂಪರೆಯಿಂದ ಅತಿಥಿ ಸತ್ಕಾರದ ಮಾತನ್ನು ಕೇಳಿದ್ದಳು. ಪತ್ನಿಯು ಕೋಪಿಸಿಕೊಳ್ಳದಿರಲೆಂದು ಅವನು ಈ ವಾದವನ್ನು ಮುಂದಿಟ್ಟನು, ಆದರೆ ಅವಳ ಮೇಲೆ ಇದರ ಪ್ರಭಾವವೇನಾದೀತು. ಅವಳು ರೇಗಿಕೊಂಡು ಹೇಳಿದಳು-'ನಿಮ್ಮ ಈ ಮಿತ್ರ ಮತ್ತು ಅತಿಥಿ ಹಾಳಾಗಿ ಹೋಗಲಿ ನನಗೇನು; ಒಲೆ ಊದಿ ಊದಿ ನನ್ನ ಕಣ್ಣುಗಳು ನೋಯುತ್ತಾ ಇವೆ. ಈ ದಿನ ಮಿತ್ರ, ನಾಳೆ ಅತಿಥಿ, ನಾಡಿದ್ದು ವ್ಯಾಪಾರಿ ದಿನವೂ ಒಂದಲ್ಲ ಒಂದು ಆಪತ್ತು ಇದ್ದೇ ಇರುತ್ತದೆ. ಈ ಮನೆಕೆಲಸದಿಂದ ನನಗೆ ಸಾಕು ಸಾಕಾಗಿಹೋಗಿದೆ. ನನ್ನಿಂದ ಇದೆಲ್ಲಾ ಆಗುವುದಿಲ್ಲ, ಬೇರೆಯೇನಾದರೂ ನಿಮ್ಮ ವ್ಯವಸ್ಥೆ ಮಾಡಿಕೊಳ್ಳಿ. ಗಂಡನು ಸಂಕೋಚಪಟ್ಟುಕೊಂಡು ಮೆಲ್ಲಗೆ ಹೇಳಿದನು- 'ಲೇ ಸ್ವಲ್ಪ ನಿಧಾನವಾಗಿ ಮಾತನಾಡು, ಆತ ಹೊರಗಡೆಯೇ ನಿಂತಿದ್ದಾನೆ,

ಕೇಳಿಸಿಕೊಂಡರೆ ಆತನಿಗೆ ಬಹಳ ದುಃಖವಾಗುವುದು. ಆಕೆಯು ಸಿಡುಕಿನಿಂದ ಹೇಳಿದಳು–'ಇನ್ನೂ ಒಳ್ಳೆಯದೇ ಆಯಿತು, ಬೇಗ ಆಪತ್ತು ತೊಲಗುವುದು.' ಪತಿಯು ಆಕೆಯನ್ನು ಸ್ವಲ್ಪ ಹೊಗಳಿ ಯಾವ ರೀತಿಯಿಂದಲೋ ಒಪ್ಪಿಸಿ ಹೇಳಿದನು ನೋಡು! ನಾನು ಮೊದಲೇ ಆತನಿಗೆ ಹೇಳಿಬಿಟ್ಟಿದ್ದೇನೆ ನನ್ನ ಹತ್ತಿರ ಕೆಲಸವಿಲ್ಲ, ನೀನು ಬೇರೆ ಉಪಾಯ ಯೋಚಿಸು ಎಂದು ತಿಳಿಸಿದ್ದೇನೆ, ಮೂರು–ನಾಲ್ಕು ದಿನಗಳಲ್ಲಿ ಹೊರಟು ಹೋಗುತ್ತಾನೆ. ಅಷ್ಟು ದಿವಸ ಯಾವ ರೀತಿಯಿಂದಲಾದರೂ ನಮ್ಮ ಮರ್ಯಾದೆಯಗೆ ತಕ್ಕಂತೆ ಆತನಿಗೆ ಭೋಜನದ ವ್ಯವಸ್ಥೆ ಮಾಡಲೇಬೇಕು. ಪತ್ನಿಯು ಒಪ್ಪಿದಳು ಮತ್ತು ಅಡಿಗೆ ತಯಾರಿಸಿದಳು. ಆದರೆ ಮನಸ್ಸಿನಲ್ಲಿ ಕಷ್ಟದ ಭಾವನೆ ಉಳಿದೇ ಇತ್ತು.

ಭೋಜನ ಸಿದ್ಧವಾದ ನಂತರ ಬಡ ಅತಿಥಿಯನ್ನು ಜೊತೆಯಲ್ಲಿ ಕರೆದುಕೊಂಡು ಶ್ರೀಮಂತ ಮಿತ್ರನು ಒಳಗಡೆ ಬಂದಾಗ ಪತ್ನಿಯು ಹೇಳಿದಳು– 'ಮೊದಲು ನಿಮ್ಮ ಸ್ನೇಹಿತರಿಗೆ ಭೋಜನ ಮಾಡಿಸಿರಿ, ಏಕೆಂದರೆ ಅತಿಥಿಗೆ ಮೊದಲು ಭೋಜನ ಮಾಡಿಸುವುದು ಧರ್ಮ; ನಂತರ ನೀವು ಮಾಡುವುದು, ಗಂಡನು ಈ ಮಾತನ್ನು ಒಪ್ಪಿ ಅತಿಥಿಗೆ ಒಳ್ಳೆಯ ಭೋಜನ ಮಾಡಿಸಿದನು. ಸಕ್ಕರೆಯಿಂದ ಮಾಡಿದ ಖೀರು, ಪೂರಿ, ಮೊಸರು ಮತ್ತು ಅನೇಕ ಬಗೆಯ ತರಕಾರಿಗಳು ಊಟದಲ್ಲಿ ಸೇರಿದ್ದವು. ಆದರೆ ಊಟ ಬಡಿಸುವವರಲ್ಲಿ ಯಾವ ಉಲ್ಲಾಸವಾಗಲೀ ಅಥವಾ ಆನಂದವಾಗಲೀ ಇರಲಿಲ್ಲ. ಅಲ್ಲಿ ಪ್ರತ್ಯಕ್ಷವಾಗಿ ಉದಾಸೀನತೆ ಹಾಗೂ ವಿಷಾದವಿತ್ತು. ಅವರು ಯಾವುದೋ ಸಂಕಟಕ್ಕೆ ಸಿಕ್ಕಿ ಕೊಂಡವರಂತೆ ಮತ್ತು ಮನಸ್ಸಿಲ್ಲದೆ ಇದನ್ನೆಲ್ಲಾ ಮಾಡಬೇಕಾಗಿದೆ ಎಂಬಂತಿರುವುದು ಗೊತ್ತಾಗುತ್ತಿತ್ತು. ಬಡ ಅತಿಥಿಯು ಸುಮ್ಮನೆ ಊಟವನ್ನೇನೋ ಮಾಡಿದನು. ಆದರೆ ಅವರ ಸ್ವಭಾವವನ್ನು ಕಂಡು ಅವನಿಗೆ ನೆಮ್ಮದಿಯಾಗಲಿಲ್ಲ. ಸುಖ ನೆಮ್ಮದಿ ಪ್ರೇಮದಲ್ಲಿಯೇ ಹುದುಗಿರುತ್ತದೆ. ಊಟದ ನಂತರ ಮೂತ್ರ ವಿಸರ್ಜನೆಗಾಗಿ ಹೊರಕ್ಕೆ ಹೋದನು; ಈ ಕಡೆ ಮನೆಯೊಡತಿಯು ತನ್ನ ಗಂಡನಿಗೆ ಊಟ ಬಡಿಸಿದಳು. ಅದರಲ್ಲಿ ಅತಿಥಿಗೆ ಬಡಿಸದೆ ಮುಚ್ಚಿಟ್ಟಿದ್ದಂತಹ ಅನೇಕ ಪದಾರ್ಥಗಳಿದ್ದವು. ಆ ಬಡಪಾಯಿಯು

ಮೂತ್ರವಿಸರ್ಜನೆಯ ನಂತರ ಕೈತೊಳೆದುಕೊಳ್ಳಲು ಒಳಗೆ ಬಂದನು ಮತ್ತು ಇಚ್ಛೆಯಿಲ್ಲದ್ದಿದ್ದರೂ ಸಹ ಸಹಜ ವಾಗಿಯೇ ಶ್ರೀಮಂತ ಮಿತ್ರನ ಊಟದ ತಟ್ಟೆಯ ಕಡೆಗೆ ಅವನ ದೃಷ್ಟಿಹೋಯಿತು. ಅವನು ನೋಡುತ್ತಾನೆ, ಬಾದಾಮಿಯ ಹಲ್ವಾ, ಒಂದು ಡಬರಿಯಲ್ಲಿ ಖೀರಿನ ಕೆನೆ ಮತ್ತು ಮತ್ತೊಂದರಲ್ಲಿ ಮೊಸರಿನ ಕೆನೆ ಇದ್ದವು. ಅತ್ಯುತ್ತಮವಾದ, ತೆಳುವಾದ ಚಪಾತಿಗಳೂ, ಅವುಗಳ ಮೇಲೆ ಶುದ್ಧವಾದ ಬೆಣ್ಣೆ ಹಾಕಲಾಗಿತ್ತು, ಕೋಸು, ಪಡವಲಕಾಯಿ ಮತ್ತು ಇನ್ನೂ ಅನೇಕ ತರಕಾರಿಗಳು ಹಾಗೂ ಬಗೆಬಗೆಯ ಉಪ್ಪಿನಕಾಯಿ ಇಟ್ಟಿತ್ತು. ಅವೆಲ್ಲವನ್ನೂ ನೋಡಿ ಈ ವಿಷಮತೆ (ಅಸಮಾನತೆ)ಯ ಕಾರಣದಿಂದ ಈತನೊಡನೆ ನನಗೆ ಭೋಜನ ಮಾಡಿಸಲಿಲ್ಲವೆಂದು ಅವನಿಗೆ ಸ್ಪಷ್ಟವಾಗಿ ತಿಳಿದುಹೋಯಿತು. ವೈಷಮ್ಯಜನಿತ ಸಂತಾಪ ಮತ್ತಷ್ಟು ಹೆಚ್ಚಿತು ಮತ್ತು ಅವನು ಸುಮ್ಮನೆ ಕೈತೊಳೆದುಕೊಂಡು ಹೊರಕ್ಕೆ ಹೊರಟು ಹೋದನು.

ರಾತ್ರಿ ಆಯಿತು. ಶ್ರೀಮಂತ ಮಿತ್ರನು ಹೆಂಡತಿಯನ್ನು ಕೇಳಿದನು–'ಅತಿಥಿಗೆ ಮಲಗಿಕೊಳ್ಳಲು ಎಲ್ಲಿ ವ್ಯವಸ್ಥೆ ಮಾಡಬೇಕು?' ಹೆಂಡತಿಯು ಸಿಡುಕಿನಿಂದ ಹೇಳಿದಳು–'ನನ್ನ ತಲೆಯ ಮೇಲೆ! ಸರಿಸರಿ, ಇದೂ ಸಹ ಕೇಳಬೇಕಾದ ಮಾತೇ? ಎಲ್ಲಿ ಅನುಕೂಲವೋ, ಅಲ್ಲಿಯೇ ಮಾಡಿದರಾಯ್ತು. ಪತಿಯು ಹೇಳಿದನು– 'ಒಳ್ಳೆಯದು, ಹೊರಗಡೆ ಜಗಲಿಯಮೇಲೆ ಆತ ಮಲಗಿಕೊಳ್ಳುವನು. ಆದರೆ ಅಲ್ಲಿ ಸೊಳ್ಳೆ ಬಹಳ, ಬಡಪಾಯಿಗೆ ನಿದ್ರೆ ಬರಲಾರದು. ಎರಡು ದಿನದ ಮಟ್ಟಿಗೆ ಸೊಳ್ಳೆಪರದೆ ಕೊಟ್ಟರೆ ಒಳ್ಳೆಯದೆ. ಆಕೆಯು ಕುಪಿತಳಾಗಿ ಹೇಳಿದಳು–'ನನ್ನ ಹತ್ತಿರ ಇರುವುದೊಂದೇ ಸೊಳ್ಳೇಪರದೇ, ನೀವು ಕಟ್ಟಿಕೊಳ್ಳಿ ಅಥವಾ ಬಿಡಿ'. ಪತ್ನಿಯ ಸ್ವಭಾವವನ್ನು ಅವನು ತಿಳಿದುಕೊಂಡಿದ್ದನು. ಹೆಚ್ಚು ಮಾತನಾಡುವುದು ಹಿತಕರವಲ್ಲ ಎಂದು ಅರಿತುಕೊಂಡು ಸದ್ದಿಲ್ಲದೆ ಹೊರಗಡೆಗೆ ಹೋದನು ಮತ್ತು ಅತಿಥಿ ಮಿತ್ರನಿಗೆ ಹೇಳಿದನು–'ಹಾಸಿಗೆ ದಿಂಬು ಹಾಕಿದೆ ನೀನು ಇಲ್ಲಿಯೇ ಮಲಗಿಕೋ. ಇಲ್ಲಿಯೇ ಅನುಕೂಲವಿರುವುದು. ಆತನು ವಿನಮ್ರ ಮಾತಿನಿಂದ ಸ್ವೀಕರಿಸಿದನು. ಸಾಹುಕಾರನು ಒಳಗಡೆ ಹೋದನು ಮತ್ತು ಆ ಮಿತ್ರನು ಅಲ್ಲಿಯೇ ಮಲಗಿದನು. ಬೇಸಿಗೆಯ

ಕಾಲ, ಸೊಳ್ಳೆಗಳಿದ್ದವು. ಹಾಸಿಗೆ ದಿಂಬುಗಳಲ್ಲಿ ತಿಗಣೆಗಳೇನೂ ಕಡಿಮೆ ಇರಲಿಲ್ಲ. ಮಲಗಿಕೊಂಡ ಕೂಡಲೇ ಸಾಲು ಸಾಲಾಗಿ ಹೊರಟು ಅವು ಅವನ ಮೇಲೆ ಆಕ್ರಮಣ ಪ್ರಾರಂಭಿಸಿದವು. ತಿಗಣೆ ಗಳನ್ನು ಆಯ್ದು ಆಯ್ದು ಎಸೆಯುವುದರಲ್ಲಿ ಮತ್ತು ಸೊಳ್ಳೆಗಳನ್ನು ಓಡಿಸುವುದ ರಲ್ಲಿಯೇ ರಾತ್ರಿ ಕಳೆಯಿತು. ಆತನು ಒಂದು ಘಂಟೆಕಾಲವೂ ಸಹ ಹಾಯಾಗಿ ನಿದ್ರಿಸಲಾಗಲಿಲ್ಲ.

ಮಾರನೇ ದಿವಸ ಬೆಳಿಗ್ಗೆ ಅವನು ಪೇಟೆಯ ಕಡೆಗೆ ಹೋದನು. ಒಂದು ಚೌಕದ ಬಳಿ ಹೋಗುತ್ತಿರುವಾಗ ಅವನಿಗೆ ತಮ್ಮ ಊರಿನ ಒಬ್ಬ ಪರಿಚಿತ ಮನುಷ್ಯ ಕಂಡನು. ಅವನೂ ಇವನನ್ನು ನೋಡಿದನು. ಅವನು ಬಹಳ ಬಡವನಾಗಿದ್ದನು, ಆದರೆ ಬಹಳ ಸಹೃದಯಿಯಾಗಿದ್ದನು. ನೋಡಿದ ಕೂಡಲೇ ಓಡುತ್ತಾ ಹತ್ತಿರ ಬಂದು ಬಹಳ ಪ್ರೀತಿ ಹಾಗೂ ಉಲ್ಲಾಸದಿಂದ ಕೇಳಿದನು–'ಅಯ್ಯಾ ! ನೀನು ಇಲ್ಲಿಗೆ ಯಾವಾಗ ಬಂದೆ? ನನಗೆ ಯಾವ ಸಮಾಚಾರವನ್ನೂ ತಿಳಿಸಲಿಲ್ಲ. ನಿನಗೆ ಬಹಳ ತೊಂದರೆ ಯುಂಟಾಗಿರಬೇಕು. ಸುದ್ದಿ ತಿಳಿದಿದ್ದರೆ ನಾನು ಸ್ಟೇಷನ್ ಬಳಿಗೆ ಬಂದು ಬಿಡುತ್ತಿದ್ದೆ. ಇಲ್ಲಿಗೆ ಬಂದ ಮೇಲೆಯೂ ಸಹ ನೀನು ಯಾವ ವರ್ತಮಾನವನ್ನೂ ಕಳುಹಿಸಲಿಲ್ಲ. ನೀನು ಎಲ್ಲಿ ಇಳಿದುಕೊಂಡಿರುವೆ?' ನಡೆ ಮನೆಗೆ ಹೋಗೋಣ. ನಾನು ಸಾಮಾನು ತೆಗೆದುಕೊಂಡು ಬರುತ್ತೇನೆ. ನಿನ್ನನ್ನು ಭೇಟಿಯಾದದ್ದೂ ನನ್ನ ಭಾಗ್ಯ. ಬೇರೆ ಪ್ರದೇಶದಲ್ಲಿ ಒಳ್ಳೆಯ ಮನೆಯ ಪ್ರೇಮೀ ಮನುಷ್ಯರು ಎಲ್ಲಿ ಸಿಕ್ಕುತ್ತಾರೆ.'

ಅವನ ಪ್ರೀತಿ–ವಿಶ್ವಾಸದ ಮಾತುಗಳನ್ನು ಕೇಳಿ ಆ ಬಡಪಾಯಿಯ ಹೃದಯ ಕರಗಿ ನೀರಾಗಿ ಹೋಯಿತು. ಅವನಿಗೆ ಬಹಳ ಭರವಸೆ ದೊರೆಯಿತು. ಮುಳುಗುತ್ತಿರು ವವನಿಗ ಆಧಾರ ದೊರೆತಂತಾಯಿತು. ಅವನು ತಾನು ಬಂದ ಎಲ್ಲಾ ಕಾರಣಗಳನ್ನೂ ತಿಳಿಸಿದನು ಮತ್ತು ಹೇಳಿದನು. ಸಾಮಾನಾದರೋ ನನ್ನ ಹತ್ತಿರ ಒಂದು ಪಂಚೆ–ಟವಲ್, ಒಂದು ಜಮಖಾನಾ ಮತ್ತು ಚೆಂಬು ಮಾತ್ರ ಇವೆ. ಅವುಗಳನ್ನು ಆ ಸಾಹುಕಾರರ ಮನೆಯಲ್ಲಿ ಇಟ್ಟಿದೆ. ಆ ಬಡ ಮನುಷ್ಯನು ಹೇಳಿದನು– ಅವರು ಬಹಳ ದೊಡ್ಡ ಮನುಷ್ಯರು. ನೀವು ನನ್ನನ್ನು ತಮ್ಮವನೆಂದು

ಭಾವಿಸುವುದಾದರೆ ನೀವು ನಮ್ಮ ಮನೆಗೆ ಬಂದು ಹಾಯಾಗಿರಿ, ಮನೆಯಲ್ಲಿರುವುದನ್ನು ತಿಂದು ಆನಂದವಾಗಿರಿ. ನಾನು ಅದೂ ಇದೂ ಬಗೆ ಬಗೆಯ ವಸ್ತುಗಳನ್ನು ಕೊಳ್ಳುವುದೂ- ಮಾರುವುದು ಈ ಕೆಲಸವನ್ನು ಮಾಡುತ್ತೇನೆ. ದಿನವೂ ಹತ್ತು ಹದಿನೈದು ರೂಪಾಯಿ ಸಂಪಾದಿಸಿಕೊಳ್ಳುತ್ತೇನೆ. ನಾನೊಬ್ಬನೇ ಇದ್ದೇನೆ. ನೀವೂ ಬಂದಿರುವುದಾದರೆ ನಾವು ಇಬ್ಬರಾಗುವೆವು. ಎರಡರಷ್ಟು ಕೆಲಸ ನಡೆದರೆ ಸಂಪಾದನೆಯೂ ಎರಡೂ ಎರಡೂವರೆ ಯಷ್ಟು ಹೆಚ್ಚುವುದು. ಪರಿಶ್ರಮ ಮತ್ತು ಸತ್ಯದ ಕೆಲಸ, ಎಷ್ಟು ಪರಿಶ್ರಮವೋ ಅಷ್ಟೇ ಲಾಭ. ತಿಂಗಳಿಗೆ ಒಂದು ನೂರು ರೂಪಾಯಿಯಂತೆ ನೀವು ಮನೆಗೆ ಕಳುಹಿಸಬಹುದು. ಇನ್ನೂ ಹೆಚ್ಚಿನದಕ್ಕೂ ಪ್ರಯತ್ನ ಪಡಲಾಗುವುದು. ನೀವು ಗಾಬರಿ ಪಡಬೇಕಾಗಿಲ್ಲ, ಭಗವಂತ ಬಡವರ ಮೊರೆಯನ್ನು ಆಲಿಸುವನು. ನೂರು ರೂಪಾಯಿ ನನ್ನ ಹತ್ತಿರ ಇಟ್ಟುಕೊಂಡಿದ್ದೇನೆ, ಅದನ್ನು ಈ ದಿನವೇ ಕಳುಹಿಸಿಕೊಡು-ಎಂದೆಲ್ಲಾ ಹೇಳಿ ಅವನು ಆತನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ತಗಡಿನ ಹೊದಿಕೆಯ ಮಣ್ಣಿನ ಚಿಕ್ಕ ಮನೆಯಾದರೂ ಚೊಕ್ಕಟವಾಗಿತ್ತು. ಅದರಲ್ಲಿ ಹೊರಗಡೆ ಚಿಕ್ಕ ಅಂಗಡಿಯೊಂದಿತ್ತು. ಹೋದಕೂಡಲೇ ಅವನು ನೂರು ರೂಪಾಯಿಗಳನ್ನು ತಕ್ಷಣ ಮನಿಯಾರ್ಡರ್ ಮಾಡಿದನು. ಬರಗಾಲ ಪೀಡಿತರಿಗೆ ಆ ಸಮಯದಲ್ಲಿ ಎಷ್ಟು ಆನಂದ ಮತ್ತು ಭರವಸೆ ಮೂಡಿತೋ, ಅದನ್ನು ಹೇಳಲಸಾಧ್ಯ. ನಂತರ ಬಡ ಅಂಗಡಿಯವನು ಸಾಹುಕಾರನ ಬಳಿಗೆ ಹೋಗಿ ಅವನ ಸಾಮಾನುಗಳನ್ನು ತಂದನು.

ಮನೆಗೆ ಬಂದ ನಂತರ ಅವನು ತನ್ನ ಪತ್ನಿಗೆ ಹೇಳಿದನು-

ನಮ್ಮ ರಾಜ್ಯದ ಒಬ್ಬ ಒಳ್ಳೆಯ ವ್ಯಕ್ತಿ ಬಂದಿದ್ದಾರೆ, ನನಗೆ ಪರಿಚಿತರೂ ಆಗಿದ್ದಾರೆ ಅವರಿಗೆ ಭೋಜನ ಸಿದ್ಧಪಡಿಸು. ಸಾಧ್ವೀ ಪತ್ನಿಯು ಸಂತೋಷದಿಂದ ಹೇಳಿದಳು. ನಮ್ಮ ರಾಜ್ಯದವರಾದ ಒಳ್ಳೆಯ ವ್ಯಕ್ತಿ ಮನೆಗೆ ಬಂದಿರುವುದು ನಮ್ಮ ಒಳ್ಳೆಯ ಅದೃಷ್ಟ, ಭಗವಂತನು ನಮಗೆ ಇಂತಹ ಸದವಕಾಶವನ್ನು ಒದಗಿಸಿ ಕೊಟ್ಟಿರುವುದರಿಂದ ನಾವು ಧನ್ಯರಾದೆವು. ಆಕೆಯು ಬಹಳ ಪ್ರೀತಿಯಿಂದ ಅಡಿಗೆ ಮಾಡಿದಳು. ಆ ಕಾಲದಲ್ಲಿ ಅಕ್ಕಿ ಅಗ್ಗವಾಗಿತ್ತು ಅನ್ನ, ಸಾಧಾರಣ ಸೊಪ್ಪು ತರಕಾರಿ,

ಗೋಧಿಯ ರೊಟ್ಟಿ ಮತ್ತು ಮಜ್ಜಿಗೆ ಮನೆ-ಯಜಮಾನಿಯು ಇಬ್ಬರಿಗೂ ಬಹಳ ಪ್ರೀತಿ ಆದರಗಳಿಂದ ಭೇದ-ಭಾವವಿಲ್ಲದೆ ಸಮಾನ-ಭಾವನೆಯಿಂದ ಊಟ ಮಾಡಿಸಿದಳು, ಅಲ್ಲದೆ ಅತಿಥಿಗೆ ಪದೆ-ಪದೇ ಬಹು ಪ್ರೀತಿಯಿಂದ ಅವಳು ಮತ್ತೆ ಮತ್ತೆ ಕೇಳಿ ಬಡಿಸುತ್ತಿದ್ದಳು. ಇಂದು ಅವನಿಗೆ ಊಟ ಮಾಡುವುದರಲ್ಲಿ ತೃಪ್ತಿ ಸಿಕ್ಕಿತು. ಬಹು ನೆಮ್ಮದಿ ದೊರೆಯಿತು. ಪ್ರೇಮದ ಒಣ ರೊಟ್ಟಿಯಲ್ಲಿ ದೊರೆಯುವ ಆನಂದ ಪ್ರೇಮವಿಲ್ಲದ ಮೃಷ್ಟಾನ್ನದಿಂದ ಎಂದಿಗೂ ಇಲ್ಲ. ಊಟದ ನಂತರ ಇಬ್ಬರು ಅಂಗಡಿ ಯಲ್ಲಿ ಕೆಲಸದಲ್ಲಿ ನಿರತರಾದರು.

ರಾತ್ರಿ ತನ್ನ ಸನ್ಮಾನ್ಯ ಅತಿಥಿಗೆ ಮಲಗಿಕೊಳ್ಳಲು ಆ ಬಡ ಅಂಗಡಿಯವನು ತಾನು ಹತ್ತು ರೂಪಾಯಿಗೆ ಕೊಂಡು ತಂದಿದ್ದ ಒಂದು ಬಗೆಯ ಹುಲ್ಲಿನಿಂದ ತಯಾರಿಸಿದ ಹಳೆಯ ಮಂಚವನ್ನು ಹಾಕಿಕೊಟ್ಟನು. ಅದರ ಮೇಲೆ ಗೋಣಿಚೀಲವನ್ನು ಹಾಸಲಾಯಿತು. ಸೊಳ್ಳೆಗಳಿಂದ ಪಾರಾಗಲು ಆತನ ಪತ್ನಿಯು ತೆಳುವಾದ ಮಲ್ಲಿನ ತನ್ನ ಹಳೆಯ ಹೊದಿಕೆಯನ್ನು ನಾಲ್ಕು ಬಿದಿರಿನ ದಬ್ಬೆ ನಿಲ್ಲಿಸಿ ಅವುಗಳ ಮೇಲೆ ಹಾಕಿದಳು. ಬರಗಾಲ ಪೀಡಿತ ಸಹೋದರನ ಮೊದಲಿನ ರಾತ್ರಿಯ ನಿದ್ರೆಯಿತ್ತು. ಮಂಚದ ಮೇಲೆ ಮಲಗಿಕೊಂಡ ಕೂಡಲೇ ಅವನಿಗೆ ಗಾಢ ನಿದ್ರೆ ಬಂದಿತು. ರಾತ್ರಿ ಪೂರ್ತಿ ಸುಖವಾದ ನಿದ್ರೆ ಬಂದಿತು ಆತನಿಗೆ. ಆಯಾಸವೆಲ್ಲಾ ಪರಿಹಾರವಾಯಿತು.

ನಾಲ್ಕಾರು ದಿನಗಳ ನಂತರ ಒಂದು ದಿವಸ ರಸ್ತೆಯಲ್ಲಿ ಶ್ರೀಮಂತ ಮಿತ್ರನ ಭೇಟಿಯಾಯಿತು. ಬರಗಾಲ ಪೀಡಿತ ಮಿತ್ರನನ್ನು ಅವನು ಕೇಳಿದನು-'ಏನಪ್ಪ! ಎಲ್ಲಾದರೂ ಕೆಲಸದ ವ್ಯವಸ್ಥೆ ಆಗಿದೆಯೋ ಹೇಗೆ? ಎಲ್ಲಿರುವೆ? ಊಟ ತಿಂಡಿ ಸಿಕ್ಕುತ್ತಿದೆ ತಾನೇ?' ಅವನು ಹೇಳಿದನು-'ಬಹಳ ಉತ್ತಮ ವ್ಯವಸ್ಥೆಯಾಗಿದೆ. ನಾನು ನನ್ನ ರಾಜ್ಯದ ಇಂತಹ ಅಂಗಡಿ-ಮಿತ್ರನ ಮನೆಯಲ್ಲಿದ್ದೇನೆ, ಪತಿ-ಪತ್ನಿ ಇಬ್ಬರೂ ಬಹಳ ಸತ್ಪುರುಷರು. ಅಂಗಡಿಯಲ್ಲಿ ನನಗೆ ಅರ್ಧಭಾಗ ಮಾಡಿಕೊಟ್ಟಿದ್ದಾರೆ. ನೂರು ರೂಪಾಯಿಯನ್ನು ಆ ದಿವಸವೇ ಮನೆಗೆ ಕಳುಹಿಸಿದರು. ಇನ್ನು ಮುಂದೆ ಊಟ-ತಿಂಡಿಗೆ ಕೊರತೆಯೇನೂ ಇಲ್ಲದಂತೆ ಭರವಸೆ ಕೊಟ್ಟಿದ್ದಾರೆ, ಮನೆಯಲ್ಲಿಯೇ

ಎಲ್ಲರೂ ಜೊತೆಯಲ್ಲಿಯೇ ಮಾಡುವೆವು. ಕನಿಷ್ಠ ಪಕ್ಷ ಪ್ರತಿತಿಂಗಳೂ ಒಂದು ನೂರು ರೂಪಾಯಿಗಳನ್ನು ಮಕ್ಕಳು-ಮರಿಗಳಿಗಾಗಿ ಮನೆಗೆ ಕಳುಹಿಸಿ ಕೊಡಲಾಗುವುದು. ಊಟ-ತಿಂಡಿಗೂ ಬಹು ಉತ್ತಮ ವ್ಯವಸ್ಥೆಯಿದೆ. ಅವರ ಮನೆಯಲ್ಲಿ ಅಮೃತಮಯ ಭೋಜನ ಮಾಡಿ ನನಗೆ ಬಹಳ ತೃಪ್ತಿ ದೊರೆಯುತ್ತದೆ. ನಾನು ಅದನ್ನು ನನ್ನ ಜೀವನವಿಡೀ ಮರೆಯಲಾರದಷ್ಟು ಶ್ರೇಷ್ಠವಾದ ಪ್ರೇಮದಿಂದ ಕೂಡಿದ ಸಮಾನತೆಯ ವ್ಯವಹಾರ ನಡೆಯುತ್ತದೆ.' ಅವನ ಈ ಮಾತುಗಳನ್ನು ಕೇಳಿ ಸಾಹುಕಾರ ಮಿತ್ರನ ಗರ್ವಕ್ಕೆ ಪೆಟ್ಟು ಬಿದ್ದಂತಾಯಿತು, ಆದರೆ ನಿಜವಾದ ವಿಚಾರ, ಅವನಿಗೆ ತನ್ನ ನಡವಳಿಕೆ ಚೆನ್ನಾಗಿ ಗೊತ್ತಿತ್ತು. ಮಾತನಾಡಲೂ ಆಗಲಿಲ್ಲ. ಒಂದು ಮಾತು ಹೊಳೆಯಿತು, ನಮ್ಮ ಮನೆಯಲ್ಲಿ ಬಹು ಚೆನ್ನಾಗಿರುವ ಭೋಜನವಾಗುತ್ತದೆ, ಉತ್ಕೃಷ್ಟವಾದ ಸಜ್ಜಾದ ಮನೆ, ಹಾಸಿಗೆ ದಿಂಬು, ಗಾಜಿನ ದೊಡ್ಡ ದೀಪದ ಪುಂಜವಿದೆ. ಆ ದರಿದ್ರದವನ ಮನೆಯಲ್ಲಿ ಅಂತಹ ವಸ್ತುಗಳು ಎಲ್ಲಿಂದ ಬರಬೇಕು ಎಂಬ ಗರ್ವ ಬಹಳವಿತ್ತು. ಆದ್ದರಿಂದ ಅವನು ತನ್ನ ಮಾತನ್ನು ಮುಂದುವರಿಸುತ್ತಾ ಆ ಬಡ ಅಂಗಡಿಯವನನ್ನು ದೂಷಿಸುವ ಇಚ್ಛೆಯಿಂದ ಹೇಳಿದನು-'ಅಲ್ಲಿ ನಿನಗೆ ಊಟವೇನು ಸಿಕ್ಕುವುದು, ಅದೇ ದಪ್ಪಕ್ಕಿ ಅನ್ನ, ಒಣಕಲು ರೊಟ್ಟಿ, ಸೊಪ್ಪಿನ ತರಕಾರಿ ಮತ್ತು ಮಲಗಿಕೊಳ್ಳಲು ಬರೀ ನೆಲ ಅಥವಾ ಹೆಚ್ಚೆಂದರೆ ಹಳೆಯ ಮುರುಕಲು ಮಂಚ ಸಿಕ್ಕಬಹುದು. ಆ ದರಿದ್ರನ ಮನೆಯಲ್ಲಿ ಮತ್ತೇನಿದೆ? ನಮ್ಮ ಉತ್ಕೃಷ್ಟವಾದ ಊಟ ಮತ್ತು ಸಜ್ಜಾದ ಮನೆಯನ್ನು ಬಿಟ್ಟು ನೀನು ಅಲ್ಲಿಗೆ ಹೋದೆ, ಈಗ ಮನಸ್ಸಿನಲ್ಲಿ ಪಶ್ಚಾತ್ತಾಪ ಪಡುತ್ತಿರಬಹುದು, ಈ ಕ್ಷಾಮಪೀಡಿತ ಮಿತ್ರನು ನಗುತ್ತಾ ಹೇಳಿದನು-'ಅಯ್ಯಾ! ನೀವು ನಿಮ್ಮ ಮನೆಯಲ್ಲಿ ದೊಡ್ಡ ಶ್ರೀಮಂತರಾಗಿರುವಿರಿ. ನಿಮ್ಮ ಮನೆಯಲ್ಲಿ ಹಾಸಿಗೆ ದಿಂಬುಗಳಿವೆ, ಗಾಜಿನ ದೀಪದ ಗೊಂಚಲುಗಳನ್ನು ಹಾಕಿರುವಿರಿ. ಸುಸಜ್ಜಿತವಾದ ಮನೆಯಿದೆ. ನನಗಾದರೋ ಇವುಗಳೆಲ್ಲಾ ವಿಷಕ್ಕೆ ಸಮಾನ. ಉತ್ಕೃಷ್ಟವಾದ ಊಟವೂ ಇದೆ, ಆದರೆ ನನಗೆ ಅದರಿಂದೇನು? ನಿಮ್ಮ ಮನೆಯಲ್ಲಿ ನನಗೆ ಊಟದಿಂದಾಗಲೀ, ನಿದ್ರೆಯಿಂದಾಗಲಿ ನೆಮ್ಮದಿ ಸಿಕ್ಕಲಿಲ್ಲ. ತಿಗಣೆ ಮತ್ತು ಸೊಳ್ಳೆಗಳಿಂದಾದ ತೊಂದರೆ ಹೇಳತೀರದು,

ರಾತ್ರಿ ಪೂರ್ತಿನಿದ್ರೆಯೇ ಬರಲಿಲ್ಲ. ನನಗೆ ಆ ಹುಲ್ಲಿನ ಮಂಚ, ಗೋಣೀಚೀಲದ ಹಾಸಿಗೆ ಮತ್ತು ಹಳೆಯ ಹೊದಿಕೆಯ ಸೊಳ್ಳೆಪರದೆಯೇ ಸುಖಪ್ರದವಾಗಿದೆ, ನಾನು ಅವುಗಳಿಂದಲೇ ರಾತ್ರಿ ಬಹಳ ಸುಖವಾಗಿ ನಿದ್ರಿಸುತ್ತೇನೆ. ಊಟದ ಬಗ್ಗೆ ನಾನು ಏನು ಹೇಳಲಿ. ಅಲ್ಲಿ ನನಗೆ ಆ ದಪ್ಪಕ್ಕಿ ಅನ್ನ, ಒಣರೊಟ್ಟಿ ಮತ್ತು ಸೊಪ್ಪು ತರಕಾರಿಯಲ್ಲಿ ಸಿಕ್ಕುವಂತಹ ಸುಖ-ನೆಮ್ಮದಿ ಮತ್ತೆಲ್ಲಿಯೂ ದೊರೆತಿಲ್ಲ . ನಿಮ್ಮ ಮನೆಯ ಭೋಜನ ವಿಷದಂತಿತ್ತು ಮತ್ತು ಇವರ ಮನೆಯದು ಸಾಕ್ಷಾತ್ ಅಮೃತದಂತಿದೆ. ನಿಮ್ಮ ಮನಸ್ಸಿನಲ್ಲಿ ನಾನು ಭಾರವಾದಂತಿತ್ತು. ನೀವು ನಾನು ಬಂದುದನ್ನು ವಿಪತ್ತೆಂದು ಭಾವಿಸಿಕೊಂಡಿರಿ ಮತ್ತು ಮನದಲ್ಲಿ ವಿಷಮತೆ ತುಂಬಿತ್ತು. ಮಹಾತ್ಮರು ಹೇಳುತ್ತಾರೆ 'ವಿಷಮತೆಯೇ ವಿಷ, ಮತ್ತು ಸಮಾನತೆಯೇ ಅಮೃತ.' ಆದುದರಿಂದ ನಿಮ್ಮ ಮನೆಯ ಮೃಷ್ಟಾನ್ನವೂ ಸಹ ವಿಷಮತೆಯ ಕಾರಣದಿಂದ ವಿಷದಂತಿತ್ತು ಮತ್ತು ಇವರ ಮನೆಯ ಒಣಕಲು ಪಣಕಲು ಭೋಜನದಲ್ಲಿ ಸಮಾತೆಯಿರುವುದರಿಂದ ಅದು ಅಮೃತದಂತಿದೆ. ಅಷ್ಟೇ ಅಲ್ಲ, ಇವರ ನಡವಳಿಕೆಯೂ ಅಮೃತಕ್ಕೆ ಸಮಾನ. ನಿಮ್ಮ ಹತ್ತಿರ ಲಕ್ಷಾಂತರ ರೂಪಾಯಿಗಳಿವೆ ಮತ್ತು ಲಕ್ಷಾಂತರದ ಆದಾಯವಿದೆ ಹಾಗೂ ನೀವು ನನ್ನ ಬಾಲ್ಯದ ಸ್ನೇಹಿತರೂ ಆಗಿರುವಿರಿ. ಆದರೆ ನೀವು ಹಸಿವಿನಿಂದ ಹೆಣಗಾಡುತ್ತಿರುವ ನನ್ನ ಮಕ್ಕಳಿಗಾಗಿ ಒಂದಿಷ್ಟು ಹಣ ಕಳುಹಿಸಿಕೊಡಲು ಒಪ್ಪಲಿಲ್ಲ ಮತ್ತು ನನಗೆ ನೂರೋ ನೂರೈವತ್ತೋ ರೂಪಾಯಿಯ ವೇತನದ ನೌಕರಿಯನ್ನೂ ಕೊಡಿಸಲಿಲ್ಲ. ಆ ಬಡ ಅಂಗಡಿಯವನು, ಕೇವಲ ನಮ್ಮ ಒಂದೂರಿನವನಾದ ಸಂಬಂಧದಿಂದ ಸಾಧಾರಣ ಪರಿಚಯಮಾತ್ರವಿತ್ತು, ಬಡವ, ನಿರ್ಧನನಾಗಿದ್ದರೂ ನನಗೆ ಆಶ್ರಯ ಕೊಟ್ಟನು, ನನಗೆ ಸಹಾಯಮಾಡಿದನು, ನೂರು ರೂಪಾಯಿಗಳನ್ನು ತಕ್ಷಣ ಮನೆಗೆ ಕಳಿಹಿಸಿ ಕೊಟ್ಟನು. ನನ್ನನ್ನು ತನ್ನ ಕೆಲಸದಲ್ಲಿ ಸರಿಯಾಗಿ ಪಾಲುದಾರನನ್ನಾಗಿ ಮಾಡಿಕೊಂಡನು. ಹೇಳಿ, ನಾನು ಅವನ ಉಪಕಾರವನ್ನು ಹೇಗೆ ಮರೆಯಲಿ. ಅವನು ಏನೇನು ಮಾಡುವನೋ, ಮಾಡಿರುವನೋ ಅದೆಲ್ಲಾ ಉಪಕಾರದ ಭಾವನೆಯಿಂದಲ್ಲ ವಿಶುದ್ಧ ಪ್ರೇಮದಿಂದ ಮತ್ತು ಕರ್ತವ್ಯದ ಭಾವನೆಯಿಂದ ಅವನು ನನ್ನ ಮೇಲೆ ಕೃತಜ್ಞತೆ

ತೋರಿಸುತ್ತಾ ಇಲ್ಲ. ಅಲ್ಲದೆ ನನಗೆ ನೆಮ್ಮದಿ ಸುಖವನ್ನುಂಟುಮಾಡಿ ಬದಲಿಗೆ ಅವನು ನನಗೆ ಕೃತಜ್ಞನಾಗುತ್ತಾನೆ ಮತ್ತು ಇದರಲ್ಲಿ ತನ್ನನ್ನು ಧನ್ಯನೆಂದು ಭಾವಿಸಿಕೊಂಡು ಸಂತೋಷಪಡುತ್ತಾನೆ. ಅವನ ಧರ್ಮಪತ್ನಿಯದೂ ಸಹ ಇಂತಹುದೇ ಉಚ್ಚಭಾವನೆ. ಅದರಿಂದಲೇ ಅವರಿಬ್ಬರ ಮುಖದಲ್ಲೂ ಪ್ರಫುಲ್ಲತೆ ಮತ್ತು ಉಲ್ಲಾಸ ಹೊರಚೆಲ್ಲುತ್ತಿತ್ತು.

ಧನಿಕ ಮಿತ್ರನು ಕೇಳಿದನು–'ನಮ್ಮ ಮನೆಯಲ್ಲಿ ನಿನಗೆ ಯಾವುದರಲ್ಲಿ ವಿಷಮತೆ ಕಂಡುಬಂದಿತು ಮತ್ತು ಅವನ ಮನೆಯಲ್ಲಿ ಸಮತೆ ಹೇಗಿತ್ತು?' ಅದಕ್ಕೆ ಅವನು ಹೇಳಿದನು–'ನಿಮ್ಮ ಮನೆಯಲ್ಲಿ ನನಗೆ ಬಹಳ ಉತ್ತಮವಾದ ಭೋಜನ ಪದಾರ್ಥ ದೊರೆಯಿತು, ಅದರಲ್ಲಿ ಯಾವ ಸಂದೇಹವೂ ಇಲ್ಲಾ, ಆದರೆ ನನಗೆ ಅವು ವಿಷಕ್ಕೆ ಸಮಾನವಾದುವು. ನಿಮಗೆ ಜ್ಞಾಪಕವಿರಬಹುದು. ನನ್ನನ್ನು ಅತಿಥಿಯೆಂದು ತಿಳಿಸಿ ಮೊದಲು ಒಬ್ಬನಿಗೇ ಊಟ ಮಾಡಿಸಲಾಯಿತು. ಭೋಜನಾನಂತರ ನಾನು ಮೂತ್ರ ವಿಸರ್ಜನೆಗಾಗಿ ಹೊರಕ್ಕೆ ಹೋದೆನು. ನಾನು ಕೈ ತೊಳೆದುಕೊಳ್ಳುವುದಕ್ಕಾಗಿ ಹಿಂದಿರುಗಿ ಬಂದಾಗ ನನ್ನ ದೃಷ್ಟಿ ನಿಮ್ಮ ಭೋಜನ ಪದಾರ್ಥಗಳ ಕಡೆಗೆ ಹೋಯಿತು. ನಾನು ನೋಡಿದೆ–ನಿಮಗೆ ಬಾದಾಮಿಯ ಹಲ್ವಾ, ಬೆಣ್ಣೆ, ತೆಳುವಾದ ಚಪಾತಿಗಳು, ಖೀರು, ಕೆನೆ ಮೊಸರು, ಕೋಸು, ಪಡವಲಕಾಯಿ ಮುಂತಾದ ತರಕಾರಿಗಳೂ ಮತ್ತು ಉಪ್ಪಿನಕಾಯಿ ಮುಂತಾದವು ಇಟ್ಟಿವೆ. ಈ ವಸ್ತುಗಳನ್ನೆಲ್ಲಾ ನನಗೆ ಬಡಿಸಿರಲಿಲ್ಲ, ನನಗೆ ಅವುಗಳನ್ನು ತಿನ್ನುವ ಇಚ್ಛೆಯೂ ಇಲ್ಲ, ಆದರೆ ಈ ವಿಷಮತೆಯನ್ನು ನೋಡಿ ನನಗೆ ದುಃಖವಾಯಿತು. ನಿಮಗೆ ಈ ಪದಾರ್ಥಗಳನ್ನು ವಿಶೇಷ ರೂಪದಿಂದ ಬಡಿಸಬೇಕಾಗಿತ್ತು. ಆದುದರಿಂದ ನಿಮ್ಮ ಪತ್ನಿಯು 'ಅತಿಥಿಗೆ ಮೊದಲು ಭೋಜನ ಮಾಡಿಸುವ' ನೆಪಮಾಡಿ ನಿಮಗೆ ಆನಂತರ ಭೋಜನ ಮಾಡಿಸಲು ಇಚ್ಛಿಸಿದರು. ಇಂತಹ ಭೇದ ಮಾಡದೆ ನನಗೂ ನಿಮ್ಮ ಜೊತೆಯೇ ಭೋಜನ ಮಾಡಿಸಿದ್ದರೆ ಏನಾಗುತ್ತಿತ್ತು? ಸ್ವಲ್ಪ ಹಣ, ಖರ್ಚಾಗುತ್ತಿತ್ತು. ನೀವೂ ಈ ವಿಚಾರದಲ್ಲಿ ಸ್ವಲ್ಪವೂ ಯೋಚಿಸಲಿಲ್ಲ ಮತ್ತು ಪತ್ನಿಯ ಮಾತನ್ನೇ ಅನುಮೋದಿಸಿಬಿಟ್ಟಿರಿ. ಮಿತ್ರನ ಸಂಗಡ

ಇಂತಹ ನಡವಳಿಕೆ ಕಳಂಕವಾದುದಲ್ಲವೆ? ಈ ವಿಷಮತೆಯ ಕಾರಣದಿಂದ ನಿಮ್ಮ ಮನೆಯ ಊಟ ವಿಷವೆಂಬಂತೆ ಕಂಡು ಬಂತು.'

'ಅಲ್ಲಿ ಅವರ ವ್ಯವಹಾರ ನೋಡಿ, ಅವನು ಬಹಳ ಬಡವ, ಆದರೂ ಅವನ ಪತ್ನಿ ದಪ್ಪಕ್ಕಿ ಅನ್ನ, ಒಣಕಲು ರೊಟ್ಟಿ, ಸೊಪ್ಪಿನ ತರಕಾರಿ ಮತ್ತು ಮಜ್ಜಿಗೆ ಮನೆಯಲ್ಲಿ ಏನಿತ್ತೊ ಅದನ್ನು ನಮ್ಮಿಬ್ಬರನ್ನೂ ಒಂದೇ ಸಲ ಕುಳ್ಳಿರಿಸಿ ಸಮಾನ ಭಾವದಿಂದ ಬಹಳ ಪ್ರೀತಿ ಆದರಗಳಿಂದ ಹಾಗೂ ಉಲ್ಲಾಸದಿಂದ ಭೋಜನ ಮಾಡಿಸಿದಳು. ರಾತ್ರಿ ಮಲಗಿಕೊಳ್ಳಲು ತಮ್ಮ ಏಕಮಾತ್ರ ಮಂಚವನ್ನು ಹಾಕಿಕೊಟ್ಟಳು. ಹಾಸಲು ಗೋಣೀತಾಟನ್ನು ಕೊಟ್ಟು ಸೊಳ್ಳೆಯ ಉಪದ್ರವದಿಂದ ಪಾರಾಗಲು ತನ್ನ ಹೊದಿಕೆಯನ್ನು ಸೊಳ್ಳೆ ಪರದೆ ಮಾಡಿದರು. ಅವನ ಅಂತಹ ನಿಷ್ಕಾಮ ಪ್ರೇಮ ಮತ್ತು ಸಮಾನತೆಯ ನಡವಳಿಕೆಯು ನನ್ನ ಮೇಲೆ ಯಾವ ಪ್ರಭಾವ ಬೀರಿತೋ, ಅದನ್ನು ನಾನು ಬಲ್ಲೆನು. ಆದುದರಿಂದ ನಾನು ಅಲ್ಲಿ ಅಮೃತವೇ ಅಮೃತವನ್ನು ಪಡೆಯುತ್ತೇನೆ ಮತ್ತು ಅವರ ನಡವಳಿಕೆಯನ್ನು ಜ್ಞಾಪಿಸಿಕೊಂಡು ಪದೇ ಪದೇ ಆನಂದೋತ್ಸಾಹದಿಂದ ಗದ್ಗದಿತನಾಗಿ ಹೋಗುತ್ತೇನೆ.

ಸಾಹುಕಾರ ಮಿತ್ರನು ನೆಪ ತೆಗೆದು ಹೇಳಿದನು-'ನನಗೆ ಖಾಯಿಲೆ, ನನಗೆ ಅಜೀರ್ಣವುಂಟಾಗುತ್ತಿದೆ, ಆದ್ದರಿಂದ ವೈದ್ಯರು ನನಗೆ ಈ ಪದಾರ್ಥಗಳನ್ನು ತಿನ್ನಲು ಹೇಳಿದ್ದಾರೆ.' ಅದಕ್ಕೆ ಅವನು ಹೇಳಿದನು-'ಮೊದಲನೆಯದಾಗಿ ಅಜೀರ್ಣವ್ಯಾಧಿ ಯಲ್ಲಿ ಈ ಪದಾರ್ಥಗಳನ್ನು ತಿನ್ನಲು ಕೊಡುವುದಿಲ್ಲ ಮತ್ತು ಒಂದು ವೇಳೆ ಹಾಗಿದ್ದರೂ ಸಹ ನನಗೂ ಕೂಡಾ ಆ ಪದಾರ್ಥಗಳನ್ನು ಬಡಿಸಿದ್ದರೆ ತೊಂದರೆಯೇನಾಗುತ್ತಿತ್ತು?

ಶ್ರೀಮಂತ ಮಿತ್ರನ ಬಳಿ ಯಾವ ಉತ್ತರವೂ ಇರಲಿಲ್ಲ. ಅವನು ಅತ್ಯಂತ ನಾಚಿಕೆಯಿಂದ ತನ್ನ ನಡವಳಿಕೆಯ ಅಸಮಾನತೆ ಹಾಗೂ ಪ್ರೇಮ ಹೀನತೆಗಾಗಿ ಮನಸ್ಸಿನಲ್ಲಿಯೇ ಪಶ್ಚಾತ್ತಾಪಪಟ್ಟು ತಲೆತಗ್ಗಿಸಿಕೊಂಡು ಅಲ್ಲಿಂದ ಹೊರಟುಹೋದನು.

ಇದೊಂದು ಕಾಲ್ಪನಿಕ ದೃಷ್ಟಾಂತ. ಇದರಿಂದ ನಾವು ಈ ಮಾತುಗಳನ್ನು ಕಲಿತುಕೊಳ್ಳಬೇಕು- ಎಲ್ಲರೊಡನೆಯೂ ಪ್ರೇಮ ಮತ್ತು ವಿನಯದಿಂದ ಕೂಡಿದ

ತ್ಯಾಗ ಮತ್ತು ಉದಾರತೆಯ ನಡವಳಿಕೆಯಿಂದಿರಬೇಕು. ಊಟೋಪಚಾರಾದಿ ನಡವಳಿಕೆಯಲ್ಲಿ ಸಮಾನತೆಯನ್ನು ಇಟ್ಟುಕೊಳ್ಳಬೇಕು. ಪರಧರ್ಮೀಯರು ಮತ್ತು ಬೇರೇ ಜಾತಿಯವರ ಸಂಗಡ ಪಂಕ್ತಿಯಲ್ಲಿ ಕುಳಿತುಕೊಂಡು ಅವರಂತೆಯೇ ನಿಷಿದ್ಧವಾದ ಆಹಾರ ಸೇವಿಸಬೇಕೆಂಬುದು ಇದರ ಅರ್ಥವಲ್ಲ. ಪರಧರ್ಮ ದವರಾಗಲೀ ಅಥವಾ ಪರಜಾತಿಯವರಾಗಲಿ ಯಾರೇ ಆದರೂ ಸರಿ, ಎಲ್ಲರಿಗೂ ಯೋಗ್ಯತಾನುಸಾರ ಶಾಸ್ತ್ರೋಕ್ತವಾದ ಆದರ-ಸತ್ಕಾರಗಳ ಮೂಲಕ ವಿನಯ ಮತ್ತು ಪ್ರೀತಿಯಿಂದ ಯಾವ ರೀತಿಯ ಭೇದ ಭಾವವೂ ಇಲ್ಲದಂತೆ ತಮಗಾಗಿ ಮಾಡಿಕೊಂಡಿರುವ ಅಡಿಗೆಯ ಪದಾರ್ಥಗಳನ್ನೇ ಮೊದಲು ಅವರಿಗೆ ಬಡಿಸಿ ಅವರ ಊಟವಾದ ನಂತರ ತಾವು ಊಟ ಮಾಡಬೇಕು. ಭಾವನೆ ಶುದ್ಧವಾಗಿರಬೇಕು ಅರ್ಥಾತ್ ಮನಸ್ಸಿನಲ್ಲಿ ಕಿಂಚಿತ್ತೂ ವೈಷಮ್ಯ ಉಂಟಾಗಬಾರದು.



# ೧೧. ಈಶ್ವರ ದಯಾಳು ಮತ್ತು ನ್ಯಾಯಪರ

ಸಚ್ಚಿದಾನಂದಘನ ಅಖಿಲ ವಿಶ್ವೇಶ್ವರ ಪರಮದಯಾಳು ಪರಮೇಶ್ವರನ ಅಸ್ತಿತ್ವವನ್ನು ಸ್ವೀಕರಿಸುವ ಎಲ್ಲಾ ಮತಗಳ ಆಸ್ತಿಕ ಜನರೂ ಪ್ರಾಯಶಃ ಈಶ್ವರ ದಯಾಳು ಮತ್ತು ನ್ಯಾಯಪರ ಎಂಬ ಮಾತನ್ನು ಒಪ್ಪಿಕೊಳ್ಳುತ್ತಾರೆ. ಈಶ್ವರನಲ್ಲಿ ಕೇವಲ ದಯೆ ಅಥವಾ ಕೇವಲ ನ್ಯಾಯಾಧಿಕಾರದ ಏಕಾಂಗೀಭಾವವಿಲ್ಲ. ಆತನಲ್ಲಿ ಇವೆರಡು ಗುಣಗಳೂ ಒಂದೇ ಸಮಯದಲ್ಲಿ, ಒಂದಾಗಿ ಜೊತೆಯಲ್ಲಿಯೇ ಪೂರ್ಣರೂಪದಿಂದ ಇರುತ್ತವೆ ಮತ್ತು ಅವುಗಳು ಜೀವರುಗಳ ಬಗ್ಗೆ ವ್ಯವಹಾರ ಮಾಡುವುದರಲ್ಲಿ ಎರಡು ಭಾವನೆಗಳಿಂದಲೂ ಒಂದಾಗಿ ಕೆಲಸ ಮಾಡುತ್ತವೆ. ಈ ಬಗ್ಗೆ ಕೆಲವರು 'ನ್ಯಾಯ ಮತ್ತು ದಯೆ' ಎರಡು ಗುಣಗಳೂ ಒಂದೇ ಸಲ ಸೇರಿ ಹೇಗೆ ಇರಬಲ್ಲವು? ಎಂದು ಸಂದೇಹಪಡುತ್ತಾರೆ. ನ್ಯಾಯಾಲಯದಲ್ಲಿ ನ್ಯಾಯ ಪೀಠದಲ್ಲಿ ಕುಳಿತಿರುವ ನ್ಯಾಯಾಧೀಶನು ದಯೆಗೆ ವಶನಾಗಿ ಶಿಕ್ಷೆಗೆ ಯೋಗ್ಯನಾದ ವಾಸ್ತವಿಕ ಅಪರಾಧಿಗೆ ದಂಡವನ್ನೇ ವಿಧಿಸದಿರುವುದು ಅಥವಾ

ಉಚಿತವಾದುದಕ್ಕಿಂತ ಕಡಿಮೆ ವಿಧಿಸಿದ್ದರೆ, ಆಗ ಅವನ ನ್ಯಾಯದಲ್ಲಿ ಯಾವ ಅಡಚಣೆಯೂ ಬರುವುದಿಲ್ಲವೆ ? ಅಥವಾ ಅವನು ಅಪರಾಧಿಗೆ ಪೂರ್ತಿ ಶಿಕ್ಷೆ ವಿಧಿಸಿದ್ದರೆ, ಅವನ ದಯೆಯು ಅಲ್ಲಿ ವ್ಯರ್ಥವಾಗುವುದಿಲ್ಲವೇ? ಇದೇ ರೀತಿ ಈಶ್ವರನ ಕುರಿತು ಏಕೆ ತಿಳಿದುಕೊಳ್ಳಬಾರದು?'

ಈ ಸಂದೇಹಕ್ಕೆ ಉತ್ತರ ಕೊಡುವುದು ಅಷ್ಟು ಸಹಜ-ಸುಲಭವಲ್ಲ. ಪರಮಾತ್ಮನ ಗುಣಗಳ ವಿವೇಚನೆ ಮಾಡುವುದು ಮತ್ತು ಅವುಗಳ ಮೇಲೆ ಟೀಕೆ ಟಿಪ್ಪಣಿಗಳನ್ನು ಮಾಡುವುದು ನನ್ನಂಥಹ ಮನುಷ್ಯನಿಗೆ ಬರೀ ಹುಡುಗಾಟ. ಆದರೆ ನನ್ನ ಮನಸ್ಸಿನ ವಿನೋದಾರ್ಥವಾಗಿ ಪರಮಾತ್ಮನ ಗುಣಗಾನದ ಭಾವನೆಯಿಂದ ಯತ್ಕಿಂಚಿತ್ ಪ್ರಯತ್ನ ಮಾಡಲಾಗುತ್ತದೆ. ನಿಜವಾಗಿಯೂ ಮನುಷ್ಯನು ರಚಿಸಿದ ಕಾನೂನಿನೊಡನೆ ಈಶ್ವರನ ಕಾನೂನಿನ ಸಮಾನತೆಯನ್ನು ಎಂದಿಗೂ ಮಾಡಲಾಗುವು ದಿಲ್ಲ. ಮನುಷ್ಯನು ಸ್ವಾರ್ಥದಿಂದ ಕಾನೂನು ರಚಿಸದೇ ಹೋದರೂ ಅದರ ಮೇಲೆ ವಾತಾವರಣ ಮತ್ತು ಪರಿಸ್ಥಿತಿಯ ಪ್ರಭಾವ ಖಂಡಿತ ಉಂಟಾಗುತ್ತದೆ. ಮುಂದಿನ ವಿವೇಚನೆಯಲ್ಲಿಯೂ ಸಹ ಅದು ಪೂರ್ಣವಾಗಿ ಮೂಲ ರಹಿತವೆಂದು ತಿಳಿಯಲಾಗುವುದಿಲ್ಲ. ಆಸಕ್ತಿ ಅಥವಾ ಬೇರೆ ಯಾವುದಾದರೂ ಕಾರಣ ವಶದಿಂದ ಅದರಲ್ಲಿ ಬೇರೆ ಬೇರೆ ಪ್ರಕಾರದಿಂದಲೂ ಸಹ ದೋಷಕ್ಕೆ ಅವಕಾಶವಿರುವ ಸಾಧ್ಯತೆಯಿದೆ, ಆದರೆ ಈಶ್ವರನಲ್ಲಿ ದೋಷಕ್ಕೆ ಕಿಂಚಿತ್ತೂ ಸಹ ಅವಕಾಶವಿಲ್ಲ. ಇದಲ್ಲದೆ ಈಶ್ವರನು ದಯೆ, ನ್ಯಾಯ ಮತ್ತು ಉದಾರತೆಯ ಅನಂತ ನಿಧಿಯಾದ ಕಾರಣ ಅವನ ಕಾನೂನಿನಲ್ಲಿ ದಯೆ, ನ್ಯಾಯ ಮತು ಉದಾರತೆಯು ಅಧಿಕವಾಗಿರುತ್ತದೆ. ನಿಜವಾದ ಸಂಗತಿಯೆಂದರೆ ಜಗತ್ತನ್ನು ಸತ್ಯವೆಂದು ತಿಳಿದುಕೊಳ್ಳುವ ಮನುಷ್ಯನು ಸ್ವಾರ್ಥದ ಕಾರಣ ನ್ಯಾಯ ದಯೆ ಮತ್ತು ಉದಾರತೆಗಳಿಂದ ಪರಿಪೂರ್ಣವಾದ ಕಾನೂನನ್ನು ರಚಿಸಲಾರನು. ಎಲ್ಲಾ ಪ್ರಕಾರದಿಂದಲೂ ಸ್ವಾರ್ಥವಿಲ್ಲದ, ಎಲ್ಲರ ಸಹೃದಯಿ, ದಯೆಯ ಸಮುದ್ರವಾದ ಮಹಾಪುರುಷನ ಸಹೃದಯತೆ, ದಯೆ, ಪ್ರೇಮ, ವಾತ್ಸಲ್ಯ ಮುಂತಾದ ಗುಣಗಳ ಅಂತರಾಳವೇ ಸಿಕ್ಕದು. ಏನೇ ಆಗಲಿ ಅಂತಹ ನಿಯಮವನ್ನು ರಚಿಸುವುದು

ಸಾಧಾರಣ ಮನುಷ್ಯರ ಕೆಲಸವಲ್ಲ, ಆದುದರಿಂದ ಮಾನವೀಯ ಕಾನೂನಿನೊಡನೆ ಈಶ್ವರೀಯ ಕಾನೂನನ್ನು ಹೋಲಿಸಲಾಗುವುದಿಲ್ಲ, ಆದಾಗ್ಯೂ ಯೋಚಿಸಿ ನೋಡಿದರೆ ಮನುಷ್ಯರಲ್ಲಿಯೂ ದಯೆ ಮತ್ತು ನ್ಯಾಯ ಇವೆರಡೂ ಜೊತೆಯಲ್ಲಿರುವುದು ಸಾಧ್ಯವಾಗುತ್ತದೆ ಆದ್ದರಿಂದ ಕಾಲ್ಪನಿಕ ಉದಾಹರಣೆ ಕೊಡಲಾಗುತ್ತದೆ.

ರಾಮಲಾಲ್ ಎಂಬ ಒಬ್ಬ ವ್ಯಾಪಾರಿಯಿಂದ ನಾರಾಯಣ ಪ್ರಸಾದ್ ಎಂಬುವನು ಎರಡು ಸಾವಿರ ರೂಪಾಯಿಗಳನ್ನು ಪಡೆದಿದ್ದನು. ನಾರಾಯಣ ಪ್ರಸಾದ್ ಸತ್ಯಸಂಧ ಮತ್ತು ನಂಬಿಕಸ್ಥನಾದ ಮನುಷ್ಯನಾಗಿದ್ದ; ಆದರೆ ಅನೇಕ ರೀತಿ ತೊಂದರೆಗಳು ಬಂದದ್ದರಿಂದ ಅವನ ಉದ್ಯೋಗವೆಲ್ಲಾ ಹಾಳಾಗಿ ಹೋಯಿತು. ಮನೆಯ ಸಂಪತ್ತೆಲ್ಲವೂ, ಹೆಂಡತಿಯ ಮಂಗಳಮಯ ಆಭರಣಗಳ ಸಹಿತ ಮಾರಲ್ಪಟ್ಟವು. ಅವನು ಮಾಹೆಯಾನ ಎಂಬತ್ತು ರೂಪಾಯಿಗಳಂತೆ ಒಂದು ನೌಕರಿ ಹಿಡಿದನು. ಇಷ್ಟು ಕಡಿಮೆ ಆದಾಯದಲ್ಲಿ ಬಹಳ ಕಷ್ಟದಿಂದ ಅವನ ದೊಡ್ಡ ಕುಟುಂಬಕ್ಕೆ ಆಹಾರ ಸಾಮಗ್ರಿ ಸಿಕ್ಕುತ್ತಿತ್ತು. ಆದರೆ ಎಲ್ಲೆಲ್ಲಿಯೂ ಹರಡಿದ್ದ ನಿರುದ್ಯೋಗದಿಂದ ಹೆಚ್ಚು ದೊರೆಯುವ ಅವಕಾಶವಿರಲಿಲ್ಲ. ರಾಮಲಾಲನು ತನ್ನ ಹಣಕ್ಕೆ ಒತ್ತಾಯಿಸುತ್ತಿದ್ದನು. ಆದರೆ ನಾರಾಯಣಪ್ರಸಾದನಿಗೆ ಯಾವ ರೀತಿಯಿಂದಲೂ ಹಣ ಕೊಡಲು ಸಾಧ್ಯವಾಗಲಿಲ್ಲ. ರಾಮಲಾಲನು ನ್ಯಾಯಾಲಯದಲ್ಲಿ ದೂರು ಸಲ್ಲಿಸಿದನು. ಅಲ್ಲಿನ ನ್ಯಾಯಾಧೀಶನು ಬಹಳ ನಿಷ್ಠಾವಂತ, ಕಾನೂನನ್ನು ಚೆನ್ನಾಗಿ ಬಲ್ಲವ, ನ್ಯಾಯೀ ಮತ್ತು ದಯಾಳುವಾಗಿದ್ದನು. ನಾರಾಯಣಪ್ರಸಾದನು ನ್ಯಾಯಾಧೀಶನ ಬಳಿ ಹಾಜರಾಗಿ ಹೇಳಿದನು–'ಮಹಾಸ್ವಾಮಿ! ನಾನು ಸಾಹುಕಾರ ರಾಮಲಾಲರಿಗೆ ಎರಡು ಸಾವಿರ ರೂಪಾಯಿ ಖಂಡಿತ ಕೊಡಬೇಕು ಮತ್ತು ನಾನು ಸಾಯುವ ಹೊತ್ತಿಗೆ ಕೊಡುವೆನು ಆದರೆ ಈಗ ನನ್ನ ಸ್ಥಿತಿ ಬಹಳ ಹದಗೆಟ್ಟಿದೆ, ನನ್ನ ಮನೆಯಲ್ಲಿ ಒಂದು ಕಾಸೂ ಸಹ ಇಲ್ಲ, ಯಾವ ಭೂಮಿಕಾಣಿಕೆಯೂ ಇಲ್ಲ, ತಾವೇ ಚೆನ್ನಾಗಿ ಪರೀಕ್ಷಿಸಬಹುದು. ನಾನು ಎಂಬತ್ತು ರೂಪಾಯಿ ತಿಂಗಳ ಸಂಬಳದಂತೆ ಒಂದು ಕಡೆ ನೌಕರನಾಗಿದ್ದೇನೆ.

ಮನೆಯಲ್ಲಿ ಮಕ್ಕಳು ಮರಿ ಸೇರಿ ಎಂಟು ಮಂದಿ ಇದ್ದೇವೆ. ಅವರ ಜೀವನ ಬಹಳ ಕಷ್ಟದಾಯಕವಾಗಿದೆ. ಆದಾಗ್ಯೂ ನಾನು ಯಾವ ರೀತಿಯಿಂದಲಾದರೂ ಕಷ್ಟ ಸಹಿಸಿಕೊಂಡು ವರ್ಷಕ್ಕೆ ಎರಡು ನೂರು ರೂಪಾಯಿ ಗಳಂತೆ ಕಂತಿನ ಲೆಕ್ಕದಲ್ಲಿ ರಾಮಲಾಲರಿಗೆ ಕೊಡುವೆನು. ಇದರ ಮೇಲೆಯೂ ರಾಮಲಾಲರು ನನ್ನನ್ನು ಬಂಧನ ಪಡಿಸಿದರೆ ಮತ್ತು ತಾವು ಜೈಲಿಗೆ ಕಳುಹಿಸಿದರೆ ನಾನು ಜೈಲಿಗೆ ಹೊರಟುಹೋಗುವೆನು, ಆದರೆ ದಿವಾಳಿ ಖೋರನಾಗುವುದಿಲ್ಲ. ಅಂತಹ ಸ್ಥಿತಿಯಲ್ಲಿ ಖಂಡಿತವಾಗಿಯೂ ನನ್ನ ಮಕ್ಕಳು-ಮರಿಗಳಿಗೆ ವಿಪತ್ತು ಬಂದೊದಗುವುದು. ಸ್ವಾಮಿ ಯಾವುದು ಸರಿಯೆನಿಸುವುದೋ ಹಾಗೆಯೇ ಮಾಡಿ.

ನಾರಾಯಣಪ್ರಸಾದನ ಸತ್ಯದ ನುಡಿಗಳನ್ನು ಕೇಳಿ ನ್ಯಾಯಾಧೀಶರು ಸಂತೋಷಪಟ್ಟರು. ಅವರು ಹೇಳಿದರು-'ಅಯ್ಯಾ! ನೀನು ನಿನ್ನ ಸಾಹುಕಾರನಿಗೆ ತಿಳಿಸಿ ಸಮಾಧಾನ ಪಡಿಸಿ ಸರಿಮಾಡಿಕೋ. ನಿನ್ನ ಇಂತಹ ಪರಿಸ್ಥಿತಿಯನ್ನು ಕಂಡು ಆತನು ಖಂಡಿತವಾಗಿಯೂ ನಿನ್ನ ಕರಾರನ್ನು ಒಪ್ಪಿಕೊಳ್ಳಲೇಬೇಕು.' ನಾರಾಯಣ ಪ್ರಸಾದನು ರಾಮಲಾಲನಿಗೆ ಬಹಳವಾಗಿ ತಿಳಿಸಿದನು, ಬಹಳ ವಿನಯವಾಗಿ ಕೇಳಿಕೊಂಡನು; ಆದರೆ ರಾಮಲಾಲನು ಯಾವ ರೀತಿಯಲ್ಲಿಯೂ ಒಪ್ಪುವುದಿಲ್ಲ ಎಂದು ಹೇಳಿಬಿಟ್ಟನು. ವ್ಯಾಜ್ಯ ನ್ಯಾಯಾಲಯಕ್ಕೆ ಹೋಯಿತು. ರಾಮಲಾಲನ ಎರಡು ಸಾವಿರ ರೂಪಾಯಿಗಳನ್ನು ನಾರಾಯಣಪ್ರಸಾದನು ಕೊಡಬೇಕೆಂಬುದು ಸ್ಥಿರವಾಯಿತು. ನ್ಯಾಯಾಧೀಶರು ಪರೀಕ್ಷಿಸಿ ನಾರಾಯಣಪ್ರಸಾದನು ತಿಳಿಸಿದ ಪರಿ ಸ್ಥಿತಿಯು ಅಕ್ಷರಶಃ ಸತ್ಯವೆಂಬುದನ್ನು ಗೊತ್ತು ಮಾಡಿಕೊಂಡನು. ರಾಮಲಾಲನೂ ಈ ಮಾತನ್ನು ಒಪ್ಪಿಕೊಂಡನು. ನಂತರ ರಾಮಲಾಲನು ಒಪ್ಪದಿದ್ದರೂ ನ್ಯಾಯಾಧೀಶರು ನಾರಾಯಣಪ್ರಸಾದನು ವಿವರಿಸಿದ ಪ್ರಕಾರ ಎರಡು ನೂರು ರೂಪಾಯಿಗಳನ್ನು ಸಾಲಿಯಾನ ಕಂತನ್ನು ನಿಗದಿಮಾಡಿ ಅವನ ಮೇಲೆ ಎರಡು ಸಾವಿರಕ್ಕೆ ಡಿಕ್ರಿ ಮಾಡಿಬಿಟ್ಟರು. ನ್ಯಾಯಾಧೀಶರ ದಯಾಳುತನವನ್ನ ನೋಡಿ ನಾರಾಯಣಪ್ರಸಾದನು ಆನಂದಭರಿತನಾದನು. ಈ ತೀರ್ಪಿನಲ್ಲಿ ನ್ಯಾಯಾಧೀಶ ಅನ್ಯಾಯಿಯೆಂದು ತಿಳಿದುಕೊಳ್ಳಲಾಗುವುದೇ? ಆತನ ಈ ಕೆಲಸ

ಲಂಚಖೋರತನದ್ದು ಎಂದು ಭಾವಿಸ ಲಾಗುವುದೇ ಮತ್ತು ಇದರಲ್ಲಿ ದಯಾಳುತನವಿಲ್ಲ ಎಂದು ಭಾವಿಸಲ್ಪಡುವುದೇ? ಇದರಲ್ಲಿ ದಯೆ ಮತ್ತು ನ್ಯಾಯ ಎರಡೂ ಇವೆ. ಇಲ್ಲಿನ ಕಾನೂನಿನಲ್ಲಿ ಹೀಗಿರುವಾಗ ಭಗವಂತನು ತನ್ನ ಭಕ್ತರಿಗೆ ಅವನ ಇಚ್ಛಾನುಸಾರ ತೀರ್ಪುಕೊಟ್ಟರೆ ಅದರಲ್ಲಿ ಆತನ ದಯಾಳುತನ ಅಥವಾ ನ್ಯಾಯದಲ್ಲಿ ದೋಷವುಂಟಾಗುವುದೇ?

ಈಗ ಜಗಳ-ಗುದ್ದಾಟದ ಎರಡು ಉದಾಹರಣೆ ನೋಡಿ-

ಗೋವಿಂದರಾಮ ಮತ್ತು ರಾಮಪ್ರಸಾದ್ ಒಂದೇ ಬೀದಿಯಲ್ಲಿ ವಾಸಿಸುತ್ತಿದ್ದರು. ಅವರು ಯಾವಾಗೂ ಪರಸ್ಪರ ತರ್ಕ ವಿತರಣೆ ಮಾಡುತ್ತಿದ್ದರು. ತರ್ಕದಲ್ಲಿ ಜಗಳದ ಭಯ ಇದ್ದೇ ಇರುತ್ತದೆ. ಒಂದು ದಿವಸ ಪರಸ್ಪರ ಶಾಸ್ತ್ರಾರ್ಥದಲ್ಲಿ ರಾಮಪ್ರಸಾದನಿಗೆ ತನಗೆ ವಿರೋಧವಾದ ಸಿದ್ಧಾಂತವನ್ನು ಕೇಳಿ ಕೋಪಬಂದಿತು. ಕೋಪದಲ್ಲಿ ಮನುಷ್ಯನ ಬುದ್ಧಿ ನಾಶವಾಗಿ ಹೋಗುತ್ತದೆ. ಆದುದರಿಂದ ಅವನು ಗೋವಿಂದರಾಮನಿಗೆ ನಾಲ್ಕಾರು ಪೆಟ್ಟು ಹೊಡೆದನು. ಗೋವಿಂದರಾಮನು ಅವನ ಮೇಲೆ ಹೊಡೆದಾಟದ ದಾವೆ ಹೂಡಿದನು. ರಾಮಪ್ರಸಾದನಿಗೆ ಈ ವಿಚಾರ ತಿಳಿದಕೂಡಲೇ ಅವನು ನ್ಯಾಯಾಧೀಶರ ಬಳಿಗೆ ಹೋಗಿ ಎಲ್ಲಾ ವಿಷಯಗಳನ್ನೂ ಸತ್ಯವಾಗಿ ಹೇಳಿಬಿಟ್ಟನು. ಅವನು ಹೇಳಿದನು-'ನಾವುಗಳು ಧರ್ಮದ ಸಂಬಂಧದಲ್ಲಿ ಪರಸ್ಪರ ಚರ್ಚೆ ಮಾಡುತ್ತಿದ್ದೆವು. ಗೋವಿಂದರಾಮನು ನನ್ನನ್ನು ನ್ಯಾಯೋಚಿತವಾಗಿಯೇ ಧಿಕ್ಕರಿಸಿದನು. ಆದರೆ ನನ್ನ ಮನಸ್ಸಿಗೆ ಅದು ಬಹಳ ವಿರುದ್ಧವಾದುದರಿಂದ ನನಗೆ ಕೋಪ ಬಂದುಬಿಟ್ಟಿತು, ಆದ್ದರಿಂದ ನನ್ನ ಮೂಲಕ ಅಪರಾಧವಾಗಿ ಹೋಯಿತು. ನಿಜವಾಗಿಯೂ ತಪ್ಪು ನನ್ನದೇ. ನನ್ನ ಈ ಕೆಲಸಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಗುತ್ತಿದೆ. ಈಗ ತಾವು ಕೊಡುವ ಆಜ್ಞೆಯನ್ನು ಪಾಲಿಸಲು ಸಿದ್ಧನಾಗಿದ್ದೇನೆ' ನ್ಯಾಯಾಧೀಶರು ಹೇಳಿದರು-'ಅಯ್ಯಾ! ನಾನು ಇದಕ್ಕೆ ಏನೂ ಮಾಡಲಾರೆ, ನೀನು ಗೋವಿಂದರಾಮನ ಬಳಿಗೆ ಹೋಗಿ ಅವನಲ್ಲಿ ಕ್ಷಮೆಯನ್ನು ಕೇಳಿಕೋ. ಅವನು ಬೇಕಾದರೆ ನಿನ್ನನ್ನು ಕ್ಷಮಿಸಬಹುದು, ನಿನಗೆ ಇದೇ ಎಲ್ಲಕ್ಕಿಂತ ಸರಳ ಉಪಾಯ'. ನ್ಯಾಯಾಧೀಶರ ಮಾತನ್ನು ಕೇಳಿ ರಾಮಪ್ರಸಾದನು ಗೋವಿಂದ

ರಾಮನ ಮನೆಗೆ ಹೋಗಿ ಅವನ ಕಾಲಿಗೆ ಬಿದ್ದು ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾ ಕ್ಷಮೆಗಾಗಿ ಪ್ರಾರ್ಥಿಸಿಕೊಂಡು ಹೇಳಿದನು-'ಈಗ ನಾನು ನಿನಗೆ ಶರಣಾಗಿದ್ದೇನೆ, ನಾನು ನಿಜವಾಗಿಯೂ ಅಪರಾಧಿ, ಆದರೆ ನನ್ನನ್ನು ಬಿಡುಗಡೆ ಮಾಡಬೇಕು.' ಅವನ ಅನುನಯ-ವಿನಯವನ್ನು ಕೇಳಿ ಮತ್ತು ಅವನ ಹೃದಯದಲ್ಲಿನ ನಿಜವಾದ ಪಶ್ಚಾತ್ತಾಪವನ್ನು ನೋಡಿ ಗೋವಿಂದರಾಮನು ರಾಜಿಯಾದನು ಮತ್ತು ಅವನು ದಾವೆಯನ್ನು ಹಿಂದಕ್ಕೆ ಪಡೆಯಲು ಅರ್ಜಿ ಸಲ್ಲಿಸಿದನು. ನ್ಯಾಯಾಧೀಶರು ಅರ್ಜಿಯನ್ನು ಸ್ವೀಕರಿಸಿ ರಾಮಪ್ರಸಾದನನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಿದರು. ಗೋವಿಂದರಾಮ ಅಥವಾ ನ್ಯಾಯಾಧೀಶರು ಏನಾದರೂ ಅನ್ಯಾಯ ಮಾಡಿದರು ಅಥವಾ ಅವರು ದಯೆಯಿಡಲಿಲ್ಲ ಎಂಬುದಾಗಿ ಯಾರಾದರೂ ಹೇಳಬಹುದೇ? ಒಂದು ಸಲ ಭಕ್ತ ಅಂಬರೀಷನಿಗೆ ಅಪರಾಧವೆಸಗಿದಾಗ ದುರ್ವಾಸ ಮುನಿಗೆ ಶ್ರೀ ಮಹಾವಿಷ್ಣುವೂ ಸಹ ಅವನಲ್ಲಿ ಶರಣಾಗುವಂತೆ ಹೇಳಿ ಕಳುಹಿಸಿದನು. ಅಲ್ಲಿಗೆ ಹೋದಾಗ ಅಂಬರೀಷನು ಚಕ್ರವನ್ನು ಪ್ರಾರ್ಥಿಸಿಕೊಂಡು ಅವರ ಪ್ರಾಣ ಉಳಿಸಿದನು. ದಯೆ ಮತ್ತು ನ್ಯಾಯ ಎರಡೂ ಕ್ರಿಯೆಗಳು ಜೊತೆ ಜೊತೆಯಾಗಿ ನೆರವೇರಿದವು.

ಶಿವರಾಮ ಎಂಬ ಒಬ್ಬ ಒಳ್ಳೆಯ ಸ್ವಭಾವದ ಸದಾಚಾರಿ ಮನುಷ್ಯನಿದ್ದನು, ಅದೇ ಊರಿನಲ್ಲಿ ಒಬ್ಬ ಕಳ್ಳನಿದ್ದನು. ಶಿವರಾಮನು ಆಗಾಗ ಅವನಿಂದ ಕಳ್ಳತನದ ಘಟನೆಗಳನ್ನು ಕೇಳುತ್ತಿದ್ದನು. ಕೆಟ್ಟಸಹವಾಸದ ಫಲ ಬಹಳ ಕೆಟ್ಟದಾಗಿರುತ್ತದೆ. ಶಿವರಾಮನ ಮನಸ್ಸು ಒಂದು ದಿವಸ ಆಸೆಗೊಳಪಟ್ಟಿತು. ದುರಾಸೆಯು ಅವನ ಬುದ್ಧಿಯನ್ನು ಕೆಡಿಸಿತು. ತತ್ಪರಿಣಾಮವಾಗಿ ಜ್ಞಾನ-ಶೂನ್ಯನಾಗಿ ಅವನು ನಂದರಾಮ ಎಂಬ ಗೃಹಸ್ಥನ ಮನೆಗೆ ನುಗ್ಗಿ ಕಳ್ಳತನಮಾಡಿ ಮೂರು ಸಾವಿರ ರೂಪಾಯಿ ನಗದು ಮತ್ತು ಸ್ವಲ್ಪ ಒಡವೆಗಳನ್ನು ಲೂಟಿ ಮಾಡಿ ತಂದನು. ಆತ್ಮರಕ್ಷಣೆಗಾಗಿ ತಡೆಯಲು ಬಂದವರಿಗೆ ನಾಲ್ಕಾರು ಪೆಟ್ಟುಗಳನ್ನೂ ಕೊಟ್ಟನು..

ಹಣ ತೆಗೆದುಕೊಂಡು ಮನೆಗೆ ಬಂದನು ಮತ್ತು ತನ್ನ ಹೆಂಡತಿಗೆ ಎಲ್ಲವನ್ನೂ ಹೇಳಿಬಿಟ್ಟನು. ಶಿವರಾಮನ ಪತ್ನಿ ಬಹಳ ಸಾಧ್ವಿಯಾಗಿದ್ದಳು. ಅವಳಿಗೆ ತನ್ನ

ಯಜಮಾನನ ಈ ಕೃತ್ಯವನ್ನು ಕೇಳಿ ಬಹಳ ದುಃಖವಾಯಿತು. ಅವಳು ಆತನ ಕಾಲಿಗೆ ಬಿದ್ದು ಧರ್ಮಸೂಕ್ಷ್ಮವನ್ನು ತಿಳಿಸಿದಳು ಮತ್ತು ಈ ಹಣವನ್ನು ಈಗಲೇ ನೀವು ಹಿಂದಕ್ಕೆ ತಲುಪಿಸಿರಿ ಎಂದು ಪ್ರಾರ್ಥಿಸಿಕೊಂಡಳು. ಶಿವರಾಮನು ವಸ್ತುತಃ ಒಳ್ಳೆಯವನೇ ಆಗಿದ್ದು, ಅವನು ಕಳ್ಳತನದ ಕೆಲಸ ಮಾಡುವವನಾಗಿರಲಿಲ್ಲ. ದುಸ್ಸಹವಾಸದಿಂದ ಅವನ ಬುದ್ಧಿ ಕೆಟ್ಟುಹೋಗಿತ್ತು. ಪತ್ನಿಯು ತಿಳಿಸಿಹೇಳಿದ ನಂತರ ಅವನಿಗೆ ತನ್ನ ಅಪರಾಧವು ಸ್ಪಷ್ಟವಾಗಿ ಗೋಚರವಾಯಿತು. ಪತ್ನಿಯ ಸಲಹೆಯಂತೆ ಅವನು ಕೂಡಲೇ ಹಣವನ್ನು ತೆಗೆದುಕೊಂಡು ಕಲೆಕ್ಟರ್ ಸಾಹೇಬರವರ ಬಂಗಲೆಗೆ ಹೋಗಿ ಹಣ ಮತ್ತು ಒಡವೆಗಳನ್ನು ಅವರ ಹತ್ತಿರವಿಟ್ಟು ಆತ್ಮಸಮರ್ಪಣೆ ಮಾಡಿಕೊಳ್ಳುತ್ತಾ ಅಂಗಲಾಚಿ ಹೇಳಿಕೊಂಡನು–'ನನ್ನಿಂದ ಬಹಳ ದೊಡ್ಡ ಅಪರಾಧವಾಗಿ ಹೋಗಿದೆ, ದುಸ್ಸಹವಾಸದಿಂದ ನನ್ನ ಮನಸ್ಸಿನಲ್ಲಿ ಲೋಭವುಂಟಾಯಿತು. ಅದರಿಂದ ನಾನು ಮತಿಹೀನನಾದೆನು. ನಾನು ನಂದರಾಮನನ್ನು ಅನ್ಯಾಯವಾಗಿ ತೊಂದರೆಪಡಿಸಿದೆನು ಮತ್ತು ನನ್ನ ಅಪ್ಪ ಅಜ್ಜಂದಿರಲ್ಲಿ ಯಾರೂ ಮಾಡದಂತಹ ಕೆಟ್ಟ ಕೆಲಸ ಮಾಡಿಬಿಟ್ಟೆನು. ನನ್ನ ಅಪರಾಧ ಯಾವ ರೀತಿಯಿಂದ ಕ್ಷಮಿಸುವಂತಹುದಲ್ಲ, ಆದರೆ ನಾನು ತಮಗೆ ಶರಣಾಗಿದ್ದೇನೆ, ತಾವು ನನ್ನನ್ನು ಉಳಿಸಿ ಕಾಪಾಡಿರಿ. ಮುಂದೆಂದಿಗೂ ನಾನು ಇಂತಹ ಕೆಟ್ಟಕೆಲಸ ಮಾಡುವುದಿಲ್ಲ. ಕಲೆಕ್ಟರಿಗೆ ಅವನ ಮಾತಿನ ಮೇಲೆ ನಂಬಿಕೆಯುಂಟಾಯಿತು, ಇವನ ಬುದ್ಧಿ ಕೆಟ್ಟುಹೋಗಿದ್ದರೆ ಈ ವಸ್ತುಗಳನ್ನು ತೆಗೆದುಕೊಂಡು ಏಕೆ ಬರುತ್ತಿದ್ದನು ಎಂದು ಆತನು ಯೋಚಿಸಿದನು. ಕಲೆಕ್ಟರನು ಅವನನ್ನು ಅಲ್ಲಿಯೇ ಇರಿಸಿಕೊಂಡು ಪೋಲೀಸಿನವರ ಮೂಲ ನಂದರಾಮನನ್ನು ಕರೆಯಿಸಿದನು. ನಂದರಾಮನು ಪೋಲೀಸರಿಗೆ ದೂರು ಕೊಡಲು ಹೋಗುತ್ತಿದ್ದನು ಅಷ್ಟರಲ್ಲಿ ಒಬ್ಬ ಕಾನ್‌ಸ್ಟೇಬಲ್ ಬಂದು ಹೇಳಿದನು 'ನಿಮ್ಮ ಮನೆಯಲ್ಲಿ ಕಳ್ಳತನ ಮಾಡಿರುವವನು ಮಾಲು ಸಮೇತ ಕಲೆಕ್ಟರ್ ಸಾಹೇಬರ ಬಂಗಲೆಗೆ ಬಂದಿದ್ದಾನೆ, ಸಾಹೇಬರು ನಿಮ್ಮನ್ನು ಈಗಲೇ ಬರುವಂತೆ ಹೇಳಿದ್ದಾರೆ. ಮಾಲು ಸಿಕ್ಕಿದ ಮಾತನ್ನು ಕೇಳಿದ ಕೂಡಲೇ ಸಿಪಾಯಿಯ ಜೊತೆಯಲ್ಲಿ ಸಾಹೇಬರ ಬಂಗಲೆಗೆ ಹೋದನು. ಅವನನ್ನು ನೋಡಿ ಶಿವರಾಮನು ಆತನ ಕಾಲುಗಳನ್ನು ಹಿಡಿದುಕೊಂಡು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು

ಅಳುತ್ತಾ ಪ್ರಾರ್ಥಿಸಿಕೊಂಡನು. ನಂದರಾಮನು ಏನನ್ನೂ ಕೇಳಿಸಿಕೊಳ್ಳದೆ–'ನಿನ್ನನ್ನು ಜೈಲಿಗೆ ಕಳುಹಿಸಿಕೊಡದೆ ಎಂದಿಗೂ ಬಿಡುವುದಿಲ್ಲ ಎಂದು ಹೇಳಿದನು. ವ್ಯಾಜ್ಯ ಕೋರ್ಟಿಗೆ ಹೋಯಿತು. ಕಲೆಕ್ಟರ್ ಸಾಹೇಬರು ಕೇಳಿದುದಕ್ಕೆ ಶಿವರಾಮನು ತಾನು ಬಂಗಲೆಯಲ್ಲಿ ಹೇಳಿದುದನ್ನೇ ಸ್ಪಷ್ಟವಾದ ಮಾತುಗಳಲ್ಲಿ ಹೇಳಿದನು. ನಂತರ ಸಾಹೇಬರು ನಂದರಾಮನನ್ನು ಕೇಳಿದರು–'ಈತನ ನಡವಳಿಕೆ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು ತಿಳಿಸು?' ನಂದರಾಮನು 'ನನಗೆ ಈತನು ಗೊತ್ತು, ಇವನು ಒಳ್ಳೆಯ ಮನೆತನದ ಹುಡುಗ, ಕಳ್ಳರ ಸಹವಾಸದಿಂದ ಇವನಿಗೆ ಕೆಟ್ಟಬುದ್ಧಿ ಬಂದುಬಿಟ್ಟಿದೆ. ಆದರೂ ಇವನಿಗೆ ಖಂಡಿತವಾಗಿಯೂ ಸಜಾ ಆಗಲೇಬೇಕು, ಇಲ್ಲವಾದರೆ ಇವನು ಪುನಃ ಇಂತಹ ಕೆಲಸವನ್ನೇ ಮಾಡುವನು'– ಎಂದು ಹೇಳಿದನು. ಕಲೆಕ್ಟರನು ದಯಾಳುವಾಗಿದ್ದನು. ಅವನು ಶಿವರಾಮನ ಸರಳತೆ ಮತ್ತು ಸತ್ಯಸಂಧತೆಗೆ ಮುಗ್ಧನಾಗಿ ಮುಂದಕ್ಕೆ ಎಚ್ಚರಿಕೆ ಕೊಟ್ಟು ಶಿವರಾಮನನ್ನು ಬಿಡುಗಡೆ ಮಾಡಿದನು. ಈ ಪ್ರಕಾರ ದಯೆ ತೋರಿಸುವ ಕಲೆಕ್ಟರ್ ಅನ್ಯಾಯೀ ಎಂದು ತಿಳಿಯಲಾಗುವುದೇ? ಇದೇ ರೀತಿ ಸತ್ಯ ಮತ್ತು ಸರಳ ಹೃದಯದಿಂದ ಭಗವಂತನಲ್ಲಿ ಶರಣಾದರೆ ಆತನೂ ಮುಕ್ತಗೊಳಿಸಿಬಿಡುತ್ತಾನೆ.

ಇಲ್ಲಿ ಈ ಒಂದು ಪ್ರಶ್ನೆ ಏಳುತ್ತದೆ ಇವೆಲ್ಲಾ ಉದಾಹರಣೆಗಳು ಸಾಧಾರಣ ಅಪರಾಧಗಳಿಗೆ ಸರಿ. ಕೊಲೆ ಮುಂತಾದ ಮೊಕದ್ದಮೆಗಳಲ್ಲಿ ವಿಪಕ್ಷದ ಜನರು ರಾಜಿಯಾಗಿ ಹೋದರೂ ಸಹ ನ್ಯಾಯಾಧೀಶರು ಅಪರಾಧಿಯನ್ನು ಬಿಡಲಾರರು. ಒಂದು ವೇಳೆ ಬಿಟ್ಟುಬಿಟ್ಟರೆ ಆತನನ್ನು ಖಂಡಿತವಾಗಿಯೂ ಅನ್ಯಾಯೀ ಎಂದು ತಿಳಿದುಕೊಳ್ಳಲಾಗುತ್ತದೆ. ಇದಕ್ಕೆ ಉತ್ತರ ಕೊಡುವ ಮುನ್ನ ಇದನ್ನು ತಿಳಿದುಕೊಳ್ಳಬೇಕು, ಕೊಲೆ ಅಥವಾ ಮನುಷ್ಯ ವಧೆ ನ್ಯಾಯಕ್ಕಾಗಿ, ತಿಳಿಯದೆ ಮತ್ತು ತಿಳಿದೂ ತಿಳಿದು ಅನ್ಯಾಯವಾಗಿ ಮೂರು ಪ್ರಕಾರಗಳಿಂದ ಮಾಡಲಾಗುತ್ತದೆ–ನ್ಯಾಯಾಕ್ಕಾಗಿ ಮಾಡಲಾಗುವ ಮನುಷ್ಯ–ವಧೆ ಕೊಲೆಯ ಅಪರಾಧದಲ್ಲಿ ಗಣನೆಗೆ ಬರುವುದಿಲ್ಲ. ನಿಃಸ್ವಾರ್ಥಭಾವದಿಂದ ಧರ್ಮದ ರಕ್ಷಣೆಗಾಗಿ, ಲೋಕಹಿತಕ್ಕಾಗಿ, ನ್ಯಾಯ ರಕ್ಷಣೆಗಾಗಿ ಅಥವಾ ಆತ್ಮರಕ್ಷಣೆಗಾಗಿ ಯಾವ ನರ–ವಧೆ ಆಗುತ್ತವೆಯೋ ಅವುಗಳಲ್ಲಿ

ಕೊಲ್ಲುವವನು ಶಿಕ್ಷಾರ್ಹನಾಗುವುದಿಲ್ಲ. ಅಪರಾಧಿಗೆ ನ್ಯಾಯಸಮ್ಮತವಾಗಿ ಮರಣದಂಡನೆ ವಿಧಿಸುವ ನ್ಯಾಯಾಧೀಶ ಅಥವಾ ಮರಣದಂಡನೆಗೆ ಒಳಪಟ್ಟ ಮನುಷ್ಯನನ್ನು ಶೂಲಕ್ಕೇರಿಸುವ ಕಟುಕರವನು ಯಾರೂ ಸಹ ಅಪರಾಧಿಯೆನಿಸಿ ಕೊಳ್ಳುವುದಿಲ್ಲ. ಯಥಾರ್ಥವಾಗಿ ಕಳ್ಳರಿಂದ ಹಣ–ಪ್ರಾಣವನ್ನು ರಕ್ಷಿಸಿ ಕೊಳ್ಳುವುದಕ್ಕಾಗಿ ಅವರ ಮೇಲೆ ಶಸ್ತ್ರಾಘಾತ ಮಾಡುವವನೂ ಸಹ ಪುರಸ್ಕಾರಕ್ಕೆ ಪಾತ್ರನೆಂದು ತಿಳಿಯಲ್ಪಡುತ್ತಾನೆ. ಒಂದು ಸುದ್ಧಿಯಂತೆ ಬಂಗಾಳೀ ಯುವತಿಯೊಬ್ಬಳು, ದುರುದ್ದೇಶದಿಂದ ಮನೆಗೆ ನುಗ್ಗಿಬಂದ ಯುವಕನೊಬ್ಬನನ್ನು ಕೊಂದುಹಾಕಿದಳು. ಆಕೆಯನ್ನು ಬಂಧಿಸಲಾಯಿತು, ಆದರೆ ಕೋರ್ಟು ಅವಳ ಕಾರ್ಯವನ್ನು ಪ್ರಶಂಸಿಸಿ ಅವಳನ್ನು ಬಿಟ್ಟುಬಿಟ್ಟಿತು. ಮನುಷ್ಯನ ನ್ಯಾಯದಲ್ಲಿ ಅವನು ಯಾವುದೇ ಸ್ಥಳದಲ್ಲಿ ನ್ಯಾಯಾನುಕೂಲವಾದ ಕ್ರಮಮಾಡುವವನನ್ನೂ ದಂಡಾರ್ಹನೆಂದು ತಿಳಿದುಕೊಳ್ಳುವಂತಹ ತಪ್ಪಿಗೆ ಖಂಡಿತವಾಗಿಯೂ ಅವಕಾಶ ಇರಬಲ್ಲದು. ಆದರೆ ಅಂತರ್ಯಾಮಿ ಸರ್ವತಶ್ಚಕ್ಷು ಪರಮಾತ್ಮನಲ್ಲಿ ಇಂತಹ ತಪ್ಪಾಗುವ ಸಂಭವವೇ ಇರುವುದಿಲ್ಲ.'

ಎರಡನೇ ಪ್ರಕಾರದ ಕೊಲೆ ತಿಳಿಯದೇ ಆಗುತ್ತದೆ. ಅಂತಹ ಕೊಲೆಯ ಅಪರಾಧಿ ಆಪಾದಿತನೆಂದೇ ತಿಳಿಯಲ್ಪಡುತ್ತಾನೆ ಏಕೆಂದರೆ ಅವನ ಅಜಾಗರೂಕತೆ ಯಿಂದಲೇ ನರಹತ್ಯೆ ಆಗುತ್ತದೆ. ಅಂತಹ ಅಪರಾಧಿಯು ಪ್ರಯತ್ನಿಸಿದರೆ ಬಿಡುಗಡೆಯಾಗುತ್ತಾನೆ ಅಥವಾ ಪ್ರಯತ್ನದ ಕೊರತೆಯಿಂದ ಅವನಿಗೆ ಸ್ವಲ್ಪ ಸಜಾ ಕೂಡ ಆಗಬಹುದು.

ಮೂರನೇ ಪ್ರಕಾರದ ಕೊಲೆ ಕ್ರೋಧ, ಲೋಭ ವೈರ ಮುಂತಾದ ಕಾರಣ ಗಳಿಂದ ತಿಳಿದೂ ತಿಳಿದೂ ಮಾಡಲಾಗುತ್ತದೆ. ಅಂತಹ ಅಪರಾಧಿಯ ಆಪಾದನೆ ಸ್ಥಿರವಾದ ಪಕ್ಷದಲ್ಲಿ ಇಲ್ಲಿನ ಕಾನೂನಿನ ಅನುಸಾರ ಪ್ರಾಯಶಃ ನ್ಯಾಯಾಲಯದಿಂದ ಬಿಡುಗಡೆಯಾಗಲಾರನು.

ಇವುಗಳಲ್ಲಿ ಮೊದಲನೆಯ ಉದಾಹರಣೆಗಳನ್ನೇನೋ ಕೊಡಲಾಗಿದೆ. ಇಂತಹ ಇನ್ನೂ ಅನೇಕ ಉದಾಹರಣೆಗಳು ದೊರೆಯುತ್ತವೆ. ಶ್ರೀ ಖಡ್ಗಬಹಾದೂರ್

ಎಂಬ ನೇಪಾಳಿ ಯುವಕನು ಅತ್ಯಾಚಾರೀ ಹೀರಾಲಾಲ್ ಅಗರವಾಲನನ್ನು ಕೊಲೆಮಾಡಿ ದ್ದನು. ಅವನಿಗೆ ಹತ್ಯೆಯ ದಂಡವೂ ಸಹ ವಿಧಿಸಲ್ಪಟ್ಟಿತ್ತು. ಆದರೆ ಜನರು ಹೇಳಿದ ಮೇಲೆ ವೈಸರಾಯರು ಬಿಟ್ಟುಬಿಟ್ಟನು.

ಎರಡನೆಯದಕ್ಕೆ ಕೆಳಗಿನ ಉದಾಹರಣೆ ಕೊಡಲಾಗುತ್ತದೆ.

ರಾಜಸ್ಥಾನದ ಒಂದು ಊರಿನಲ್ಲಿ ರಾಮಸಿಂಹ ಎಂಬ ಒಬ್ಬ ರಜಪೂತ ನವಯುವಕನಿದ್ದನು. ಅವನು ಕಾಡಿನಲ್ಲಿ ಬೆಟ್ಟದ ಕೆಳಗಡೆ ಗುರಿಯಿಟ್ಟು ಹೊಡೆಯು ವುದನ್ನು ಅಭ್ಯಾಸಮಾಡುತ್ತಿದ್ದನು. ಹತ್ತಿರದಲ್ಲಿಯೇ ಅವನ ಸ್ನೇಹಿತ ಸಜನಸಿಂಹನು ನಿಂತಿದ್ದನು. ಗುರಿಗೆ ಸರಿಯಾಗಿ ಹೊಡೆಯುವುದಕ್ಕಾಗಿ ಅವನು ಬಂದೂಕದ ಕುದುರೆ ಯನ್ನು ಒತ್ತುತ್ತಾ ಇದ್ದನು ಅಷ್ಟರಲ್ಲಿ ಎದುರಿನಿಂದ ಒಬ್ಬ ಮನುಷ್ಯ ಹೋಗುತ್ತಿರುವುದು ಕಂಡು ಬಂದಿತು, ಅವನನ್ನು ರಕ್ಷಿಸುವುದಕ್ಕಾಗಿ ಅವನು ಕೈಯನ್ನು ತಿರುಗಿಸಿದನು, ಕುದುರೆ ಒತ್ತಲ್ಪಟ್ಟಿತ್ತು ಮತ್ತು ಗುಂಡು ಹತ್ತಿರ ನಿಂತಿದ್ದ ಸಜನಸಿಂಹನ ಹೃದಯವನ್ನು ಕೊರೆದುಕೊಂಡು ಹೋಯಿತು. ಅವನು ದೊಪ್ಪೆಂದು ಕೆಳಗೆ ಬಿದ್ದನು. ರಾಮಸಿಂಹನಿಗೆ ದಿಗ್ಭ್ರಮೆಯುಂಟಾಯಿತು. ಪೋಲೀಸರು ಬಂದರು. ರಾಮಸಿಂಹನು ಕೊಲೆ ಅಪರಾಧಕ್ಕಾಗಿ ಬಂಧಿಸಲ್ಪಟ್ಟನು. ಒಂದು ಕಡೆ ಅವನಿಗೆ ತನ್ನ ಕೈಯಿಂದ ಮಿತ್ರನು ಮರಣವಾದ ದುಃಖ ಮತ್ತು ಇನ್ನೊಂದು ಈ ಬಂಧನದ ಸಂಕಟ. ಅವನಿಗೆ ಬಹಳವಾಗಿ ದುಃಸ್ಥಿತಿಯುಂಟಾಯಿತು. ಕೋರ್ಟಿನಲ್ಲಿ ಮೊಕದ್ದಮೆ ದಾಖಲಾಯಿತು. ರಾಮಸಿಂಹನು ಎಲ್ಲಾ ಘಟನೆಗಳನ್ನೂ ನಿಜವಾಗಿ ತಿಳಿಸಿ ದುಃಖಪಡುತ್ತಾ ಕ್ಷಮೆಯನ್ನು ಯಾಚಿಸಿದನು. ನ್ಯಾಯಾಧಿಪತಿಯು ಸಜನಸಿಂಹನ ಮನೆಯವರನ್ನು ಕೇಳಿದನು– 'ನಿಮಗೆ ತಿಳಿದಿರುವಂತೆ ರಾಮಸಿಂಹನ ನಡವಳಿಕೆಯಲ್ಲಿ ಏನಾದರೂ ದೋಷವಿದ್ದಿತೋ ಅಥವಾ ಇಲ್ಲವೋ ನಿಜ ಹೇಳಿರಿ. ಈತನು ತಿಳಿಸುತ್ತಿರುವ ತಪ್ಪಿನ ಸಂಬಂಧದಲ್ಲಿ ನಿಮ್ಮೆಲ್ಲರ ಅಭಿಪ್ರಾಯವೇನು? ಅವರು ಹೇಳಿದರು 'ನಾವೂ ಈ ಮಾತನ್ನು ನಂಬುತ್ತೇವೆ. ಇವನ ಉದ್ದೇಶ ಸಜನಸಿಂಹನನ್ನು ಕೊಲ್ಲುವುದಾಗಿರಲಿಲ್ಲ, ಅವನು ಇವನ ಸ್ನೇಹಿತನೂ ಹೌದು, ನಾವೆಲ್ಲರೂ ಆಗ ಅಲ್ಲಿಯೇ ಇದ್ದೇವು. ಆದರೆ ಇವನ ಅಜಾಗರೂಕತೆಯಿಂದ ಅವನು ಕೊಲ್ಲಲ್ಪಟ್ಟನು,

ಆದ್ದರಿಂದ ಇವನಿಗೆ ಶಿಕ್ಷೆ ಖಂಡಿತ ಆಗಬೇಕು. ನ್ಯಾಯಾಧಿಪತಿಯು ಅವನ ಉದ್ದೇಶ ಮತ್ತು ಸತ್ಯಸಂಧತೆ ಬಗ್ಗೆ ನಂಬಿಕೆಯಿಟ್ಟು ಮುಂದಕ್ಕೆ ಎಚ್ಚರಿಕೆ ಕೊಡುತ್ತಾ ಅವನನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಿದನು. ಈ ಪ್ರಕಾರ ದಯೆ ತೋರಿಸುವ ನ್ಯಾಯಾಧೀಶನನ್ನು ಯಾರಾದರೂ ಅನ್ಯಾಯೀ ಎಂದು ಹೇಳಬಹುದೇ? ಮನುಷ್ಯನೂ ಸಹ ಈ ರೀತಿ ದಯೆ ಮತ್ತು ನ್ಯಾಯದ ವರ್ತನೆಯನ್ನು ಒಂದೇ ಬಾರಿಗೆ ಮಾಡಬಹುದಾದಾಗ, ಶರಣಾಗತನಾದರೆ ನ್ಯಾಯದ ರಕ್ಷಣೆಯನ್ನೂ ಮಾಡುತ್ತಾ ಪರಮಾತ್ಮನು ಅವನ ಅಪರಾಧಗಳನ್ನು ಕ್ಷಮಿಸಿ ಬಿಡುವುದರಲ್ಲಿ ಆಶ್ಚರ್ಯವೇನುಂಟು?

ಈ ಉದಾಹರಣೆಗೆ ಒಂದು ಪ್ರಾಚೀನಕಾಲದ ಕಥೆ ಜ್ಞಾಪಕಕ್ಕೆ ಬರುತ್ತದೆ. ಅದರಲ್ಲಿ ತಿಳಿಯದೇ ಅಪರಾಧವೆಸಗುವ ಪರಮ ಧಾರ್ಮಿಕ ಪುರುಷನು ಶಿಕ್ಷೆಯನ್ನು ಅನುಭವಿಸಬೇಕಾಯಿತು. ಈ ಇತಿಹಾಸ ದಶರಥ ಮಹಾರಾಜನದು. ಆತನ ಕೈಯಿಂದ ಮಾತಾ-ಪಿತೃಭಕ್ತನಾದ ಶ್ರವಣ ಕುಮಾರನು ಕೊಲ್ಲಲ್ಪಟ್ಟನು. ಈ ಇತಿಹಾಸವನ್ನು ತೆಗೆದುಕೊಂಡು ಜನರು ಪ್ರಶ್ನಿಸುತ್ತಾರೆ.

ದಶರಥ ಮಹಾರಾಜನು ತಿಳಿಯದೇ ಮಾಡಿದ ಅಪರಾಧಕ್ಕೆ ಕ್ಷಮೆಯಿಲ್ಲ ದಂತಾಯ್ತು. ಅಂದಮೇಲೆ ತಿಳಿಯದೇ ಮಾಡಲ್ಪಟ್ಟ ಅಪರಾಧಿಯ ಅಪರಾಧವು ಕ್ಷಮಿಸಲ್ಪಡತಕ್ಕದ್ದೆಂದು ಹೇಗೆ ಭಾವಿಸಲಾಗುವುದು? ಈ ಸಂದೇಹಕ್ಕೆ ಉತ್ತರವು ಇತಿಹಾಸ ಸಹಿತ ಈ ಪ್ರಕಾರವಿದೆ-

ದಶರಥ ಮಹಾರಾಜನು ಒಮ್ಮೆ ರಾತ್ರಿಯಲ್ಲಿ ಕಾಡಿನ ಕ್ರೂರ ಮೃಗಗಳ ಬೇಟೆಗಾಗಿ ಹೋಗಿದ್ದನು. ಒಂದು ಸ್ಥಳದಲ್ಲಿ ಆತನು ನದಿಯ ಬಳಿಯ ಆನೆಯು ನೀರು ಕುಡಿಯುವಂತಹ ಶಬ್ದವನ್ನು ಕೇಳಿ ತೀಕ್ಷ್ಣವಾದ ಶಬ್ದವೇಧೀ ಬಾಣವನ್ನು ಹೊಡೆದನು. ಆ ಕ್ಷಣವೇ ಯಾರೋ ನರಳುವ ಸ್ಪಷ್ಟವಾದ ಸದ್ದು ಕೇಳಿ ಬಂದಿತು- 'ಅಯ್ಯೋ! ನಿರ್ದೋಷಿ ತಪಸ್ವಿಯಾದ ನನಗೆ ಯಾರು ಹೊಡೆದರು? ನಾನು ಯಾರಿಗೆ ಏನು ಕೆಡುಕು ಮಾಡಿದ್ದೆನೆಂದು ಈ ರೀತಿ ನನ್ನನ್ನು ಕೊಂದರು. ಈಗ ನನ್ನ ವೃದ್ಧ ಮಾತಾ-ಪಿತೃಗಳ ಸೇವೆ ಮಾಡುವವರು ಯಾರು? ಅವರಿಗೆ ಯಾರು

ಊಟೋಪ ಚಾರ ಮಾಡಿಸುವವರು.' ಈ ದಯನೀಯ ಶಬ್ದಗಳನ್ನು ಕೇಳಿ ದಶರಥನಿಗೆ ಬಹಳ ವ್ಯಥೆಯುಂಟಾಯಿತು. ಆತನು ಗಾಬರಿಯಿಂದ ಓಡಿ ಹೋಗಿ ನದೀತೀರದಲ್ಲಿ ನೋಡಿದರೆ ಒಬ್ಬ ಜಟಾಧಾರೀ ತಪಸ್ವೀ ಋಷಿಯು ರಕ್ತದಿಂದ ತೊಯ್ದು ಬಿದ್ದಿದ್ದಾನೆ. ದಶರಥನು ಕ್ಷಮಾ ಯಾಚನೆ ಮಾಡಿದ ನಂತರ ಋಷಿ ಹೇಳಿದನು–'ನನ್ನ ಅಂಧ ತಾಯಿ ತಂದೆ ಬಾಯಾರಿದ್ದಾರೆ, ನಾನು ಅವರಿಗಾಗಿ ನೀರು ತೆಗೆದುಕೊಂಡು ಹೋಗಲು ಬಂದಿದ್ದೆ. ಕೊಡ ತುಂಬುವಾಗ ಶಬ್ದವಾಯಿತು, ಅದಕ್ಕೇ ನೀನು ಬಾಣ ಹೂಡಿದೆ. ನನ್ನ ತಾಯಿ ತಂದೆ ನನ್ನ ನಿರೀಕ್ಷಣೆಯಲ್ಲಿರಬಹುದು, ಹೋಗಿ ಅವರಿಗೆ ಈ ವೃತ್ತಾಂತವನ್ನು ಹೇಳು, ಅವರನ್ನು ಸಮಾಧಾನ ಮಾಡು, ಅದರಿಂದ ಅವರು ನಿನಗೆ ಶಾಪಕೊಡದಂತಾಗಲಿ. ನನ್ನ ಶರೀರದಿಂದ ಬಾಣವನ್ನು ತೆಗೆದುಹಾಕು, ನನಗೆ ಬಹಳ ನೋವಾಗುತ್ತಾ ಇದೆ. ನಿನಗೆ ಬ್ರಹ್ಮಹತ್ಯೆಯ ದೋಷ ತಟ್ಟುವುದಿಲ್ಲ, ಏಕೆಂದರೆ ನಾನು ಶ್ರವಣಕುಮಾರನೆಬ ವೈಶ್ಯನು.' ನಂತರ ದಶರಥನು ಆತನ ಬಾಣವನ್ನು ಹೊರತೆಗೆದನು, ಕೂಡಲೇ ಶ್ರವಣನ ಪ್ರಾಣವೂ ಹೋಯಿತು. ರಾಜನು ನೀರು ತೆಗೆದುಕೊಂಡು ಶ್ರವಣನ ತಾಯಿ ತಂದೆಯ ಬಳಿಗೆ ಹೋದನು. ಅವನು ಮಗನ ಬರುವಿಕೆಯನ್ನೇ ಕಾಯುತ್ತಿದ್ದರು. ಕಾಲುಗಳ ಸಪ್ಪಳವನ್ನು ಕೇಳಿಸಿಕೊಂಡು ಅವರು ಹೊತ್ತಾಗಿ ಬಂದುದರ ಕಾರಣವನ್ನು ಕೇಳಿದರು. ದಶರಥನು ತನ್ನ ಹೆಸರು–ವಿವರವನ್ನು ತಿಳಿಸಿ ಅತ್ಯಂತ ವಿನಯದಿಂದ ನಡೆದ ಎಲ್ಲಾ ಸಂಗತಿಯನ್ನೂ ಅವರಿಗೆ ತಿಳಿಸಿದನು ಮತ್ತು ನೀರು ಕುಡಿಯುವಂತೆ ಪ್ರಾರ್ಥಿಸಿಕೊಂಡನು. ವೃದ್ಧ ದಂಪತಿಗಳು ಒಂದೇ ಸಾರಿ ಮೂರ್ಛೆಹೋದರು. ನಂತರ ಚೇತರಿಸಿಕೊಂಡು ಹೇಳಿದರು–'ಮಹಾರಾಜ! ನಿನ್ನ ಈ ಅಶುಭ ಕರ್ಮವನ್ನು ನೀನೇ ಸ್ವತಃ ಬಂದು ನಮಗೆ ಹೇಳದೇ ಹೋಗಿದ್ದರೆ ನಿನ್ನ ತಲೆ ಸಾವಿರಾರು ಚೂರಾಗುತ್ತಿತ್ತು. ನೀನು ತಿಳಿಯದೇ ಈ ಕಾರ್ಯ ಮಾಡಿರುವೆ, ಏನಾದರೂ ನೀನು ತಿಳಿದೂ ತಿಳಿದು ಮಾಡಿದ್ದರೆ ಸಮಸ್ತ ರಘುಕುಲವೇ ನಾಶ ವಾಗುತ್ತಿತ್ತು. ಈಗ ನಮ್ಮಿಬ್ಬರನ್ನೂ ಮಗನಿರುವಲ್ಲಿಗೆ ಕರೆದುಕೊಂಡು ನಡೆ.' ದಶರಥನು ಇಬ್ಬರನ್ನೂ ಅಲ್ಲಿಗೆ ಕರೆದುಕೊಂಡು ಹೋದನು. ಅವರಿಬ್ಬರೂ ಮಗನ ಶರೀರವನ್ನು ಮುಟ್ಟಿ ಅಲ್ಲಿಯೇ ಬಿದ್ದರು ಮತ್ತು ಬಗೆ ಬಗೆಯಿಂದ

ಪ್ರಲಾಪಮಾಡಿದರು. ವ್ಯಥೆಗೊಳಗಾದ ಋಷಿಯು ಸಾಯುವಾಗ ಹೇಳಿದನು-'ದಶರಥ! ನಾನು ಇಂದು ಪುತ್ರವಿಯೋಗದ ದುಃಖದಿಂದ ಸಾಯುತ್ತಿರುವೆನು; ಹೀಗೆಯೇ ನಿನ್ನ ಮೃತ್ಯುವೂ ಸಹ ಪುತ್ರ ವಿಯೋಗದ ಶೋಕದಿಂದಲೇ ಉಂಟಾಗುವುದು.' ಅಷ್ಟು ಹೇಳಿ ಅವರಿಬ್ಬರೂ ಸಹ ಪರಲೋಕಕ್ಕೆ ದಯಮಾಡಿಸಿದರು.

ಅನಂತರ ರಾಜನು ಯಜ್ಞ ಮಾಡಿದನು, ಅದರ ಫಲವಾಗಿ ಆತನಿಗೆ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ವರು ಪುತ್ರರಾದರು, ಶ್ರೀರಾಮನಿಗೆ ವನವಾಸ ಉಂಟಾಯಿತು, ಇದೇ ಪುತ್ರವಿಯೋಗದ ಕಾರಣದಿಂದಲೇ ರಾಜನಿಗೆ ಮೃತ್ಯು ಸಂಭವಿಸಿತು. ಈ ಇತಿಹಾಸ ವಾಲ್ಮೀಕಿ ರಾಮಾಯಣದ ೨/೬೩ರಲ್ಲಿದೆ. ರಾಜನಿಗೆ ಶಿಕ್ಷೆ ಖಂಡಿತ ಆದಂತಾಯಿತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆದರೆ ಈ ಶಿಕ್ಷೆ ನಿಜವಾಗಿಯೂ ಬಹಳ ಅಲ್ಪವಾಗಿತ್ತು. ಪುತ್ರನು ವನವಾಸಕ್ಕೆ ಹೋದನು, ಶ್ರವಣನಂತೆ ಆತನ ಚಿರವಿಯೋಗವಾಗಲಿಲ್ಲ. ನಮಗೆ ತಿಳಿದಂತೆ ಹೇಳುವುದಾದರೆ, ರಾಜ ದಶರಥನು ವಿಶೇಷ ಪ್ರಯತ್ನ ಮಾಡಿದ್ದರೆ ಬಹುಶಃ ಈ ಶಿಕ್ಷೆಯೂ ಸಹ ಕ್ಷಮಿಸಲ್ಪಡಬಹುದಾಗಿತ್ತು. ರಾಜನ ವ್ಯಾಕುಲ ಸ್ಥಿತಿಯನ್ನು ನೋಡಿ ಶ್ರವಣನೇನೋ ತನ್ನ ಪರವಾಗಿ ಆತನನ್ನು ಕ್ಷಮಿಸಿದ್ದನು. ಮತ್ತು ಮಾತಾ-ಪಿತರನ್ನು ಸಮಾಧಾನ ಪಡಿಸಲು ಕಳುಹಿಸಿದ್ದನು. ಅದೇ ಪ್ರಕಾರ ಶ್ರವಣನ ಮಾತಾ-ಪಿತರ ವಿಶೇಷ ದಯೆ ದೊರೆತಿದ್ದರೆ ಅಲ್ಲಿಂದಲೂ ಸಹ ದಶರಥನು ನಿಷ್ಕಳಂಕನಾಗಿ ಬಿಡುಗಡೆಯಾಗುತ್ತಿದ್ದನು. ಆತನು ಎಷ್ಟು ಪ್ರಯತ್ನ ಪಟ್ಟನೋ ಅಷ್ಟೇ ಕಾರ್ಯವಾಯಿತು. ಪ್ರಯತ್ನಿಸುವುದೂ ಪ್ರಾಯಶ್ಚಿತ್ತವೇ ಸರಿ. ಮಹಾರಾಜ ದಶರಥ ಆ ಸಮಯದಲ್ಲಿ ಪರಮೇಶ್ವರನನ್ನು ಕುರಿತು ವಿಶೇಷ ಪ್ರಾರ್ಥನೆ ಮಾಡಿಕೊಂಡಿದ್ದರೆ ಮತ್ತು ಭಗವಂತನು ಇಚ್ಛಿಸಿದ್ದರೆ ಶ್ರವಣ ಕುಮಾರನ ತಂದೆಯ ಬುದ್ಧಿಯಲ್ಲಿ ಪವಿತ್ರತೆ ಮತ್ತು ದಯೆಯ ಸಂಚಾರಮಾಡಿಸಿ ಆತನ ಮೂಲಕ ದಶರಥನನ್ನು ಕ್ಷಮೆಮಾಡಿಸುವ ಸಂಭವವಿತ್ತು. ಹಾಗೆ ಆಗಿದ್ದರೆ ಈಶ್ವರನ ನ್ಯಾಯದಲ್ಲಿ ಯಾವ ದೋಷವೂ ಇಲ್ಲವೆಂದು ತಿಳಿದು ಬರುತ್ತಿತ್ತು. ಮನುಷ್ಯನ ಮೂಲಕ ಎಂತಹ ಅಪರಾಧವೇ

ಆಗಿರಲಿ, ಭಗವಂತನಿಗೆ ಶರಣುಹೋಗಿ ಅವನಿಗೆ ಅನುಕೂಲವಾದ ಪ್ರಾಯಶ್ಚಿತ್ತಾದಿ ಉಪಾಯಗಳಿಂದಲೂ ಫಲ ಅನುಭವಿಸುವುದಕ್ಕೆ ಸಮಾನವಾಗಿಯೇ ಪಾಪಗಳ ನಾಶವಾಗಿ ಹೋಗುತ್ತದೆ.

ನಿಜವಾಗಿಯೂ ಈ ಕಾಲದಲ್ಲಿನ ಕಾನೂನಿನಲ್ಲಿ ಮೂರನೇ ಪ್ರಕಾರದ ತಿಳಿದೂ ತಿಳಿದು ದುರುದ್ದೇಶದಿಂದ ಮಾಡಿದ ಕೊಲೆಗೆ ದಯೆಯ ಇಂತಹ ಪ್ರಯೋಗ ದೊರೆಯಲಾರದು, ಆದುದಿಂದ ಪರಮಾತ್ಮನ ದಯೆಯೆಂದು ತಿಳಿದುಕೊಳ್ಳ ಬಹುದಾದ ಉದಾಹರಣೆ ಕೊಡುವುದಿನ್ನೆಲ್ಲಿ? ಸತ್ಯವಾದ ನ್ಯಾಯೀ, ಪ್ರಜಾಹಿತೈಷಿ ಯಾದ ರಾಜನ ಉದ್ದೇಶವಾದರೂ ಶಿಕ್ಷೆಯ ಕಾನೂನನ್ನು ರಚಿಸುವುದು ಮತ್ತು ಅದರಂತೆ ಶಿಕ್ಷೆ ವಿಧಿಸುವುದರಲ್ಲಿ ಅಪರಾಧಿ ಬಗ್ಗೆ ದಯೆ ತೋರಿಸುವುದೇ ಆಗಿದೆಯೆಂಬುದನ್ನು ದಂಡಿಸಿ ಅವನಿಗೆ ಪಾಠ ಕಲಿಸುವುದು ಮತ್ತು ಅವನನ್ನು ತಿದ್ದಲು ಇಚ್ಛಿಸುತ್ತಾನೆ, ದ್ವೇಷದಿಂದ ಅವನಿಗೆ ದುಃಖವನ್ನುಂಟು ಮಾಡುವುದು ಮತ್ತು ನಿಷ್ಕಾರಣವಾಗಿ ಅವನ ಹತ್ಯೆಮಾಡಲು ಇಚ್ಛಿಸುವುದಿಲ್ಲ, ಹತ್ಯೆಯ ಉದ್ದೇಶವಾದರೋ ದ್ವೇಷಪೂರ್ಣ ಮತ್ತು ಪ್ರತಿಹಿಂಸೆಯ ಸ್ವಭಾವದ ಮನುಷ್ಯನ ದಾಗಿರುತ್ತದೆ. ಇಷ್ಟಾದರೂ ಸಹ ನ್ಯಾಯ ಪರಾಯಣನಾದ ರಾಜನ ಹೋಲಿಕೆಯನ್ನು ಈಶ್ವರನ ಜೊತೆ ಎಂದಿಗೂ ಮಾಡಲಾಗುವುದಿಲ್ಲ. ಈಶ್ವರನ ಕಾನೂನು ದಯೆ, ಸಹೃದಯತ ಮತ್ತು ಜೀವರುಗಳ ಹಿತದಿಂದ ಪರಿಪೂರ್ಣವಾಗಿರುತ್ತದೆ. ನಾವುಗಳು ಅದರ ಕಲ್ಪನೆಯನ್ನು ಕೂಡಾ ಮಾಡಲಾರೆವು.

ಈಶ್ವರನ ಶಿಕ್ಷೆಯೂ ವರಕ್ಕೆ ಸಮಾನವಾದುದು. ಈಶ್ವರನ ನ್ಯಾಯದಿಂದ ಪರಿಣಾಮದಲ್ಲಿ ಫಿರಿಯಾದಿ ಮತ್ತು ಅಪರಾಧಿ ಇಬ್ಬರ ಹಿತ ಮತ್ತು ಉದ್ಧಾರ ಆಗುತ್ತದೆ. ಇದೇ ಅದರ ವಿಶೇಷತೆ. ಪರಮ ದಯಾಳು ಪರಮಾತ್ಮನ ಕಾನೂನಿಗೆ ಅನುಸಾರವಾಗಿ ಯಾವ ಅಪರಾಧಿಯು ತನ್ನ ತಪ್ಪನ್ನು ಸತ್ಯಸಂಧತೆಯಿಂದ ಒಪ್ಪಿಕೊಳ್ಳುತ್ತಾ ಮುಂದೆ ಪುನಃ ಅಪರಾಧ ಮಾಡದೇ ಇರುವಂತೆ ಪ್ರತಿಜ್ಞೆ ಮಾಡುತ್ತಾನೆಯೋ ಮತ್ತು ಸತ್ಯವಾಗಿ ಹೃತ್ಪೂರ್ವಕ ಭಗವಂತನಲ್ಲಿ ಶರಣುಹೋಗಿ ಸರ್ವಸ್ವಸಹಿತ ತನ್ನನ್ನು ಕಠಿಣವಾದ ಆಜ್ಞೆಯನ್ನೂ, ಆತನ ಭಯಂಕರವಾದ

ವಿಧಾನವನ್ನೂ, ಆತನ ಪ್ರತಿಯೊಂದು ನ್ಯಾಯವನ್ನೂ ಆನಂದದಿಂದ ಅನುಮೋದಿಸುತ್ತಾ ಅದನ್ನು ಪುರಸ್ಕಾರವೆಂದು ತಿಳಿದುಕೊಳ್ಳುತ್ತಾನೆಯೋ, ಜೊತೆಗೆ ತಾನು ಮಾಡಿದ ಅಪರಾಧಗಳಿಗೆ ಕ್ಷಮೆಯನ್ನು ಕೋರದೆ ಶಿಕ್ಷೆಯನ್ನು ಪಡೆಯುವಲ್ಲಿ ಸಂತೋಷ ಪಡುತ್ತಾನೆಯೋ, ಅಂತಹ ಸರಳಭಾವದಿಂದ ಸರ್ವಸ್ವವನ್ನು ಅರ್ಪಣೆ ಮಾಡುವ ಶರಣಾಗತನಾದ ಭಕ್ತನನ್ನು ಭಗವಂತನು ಅಪರಾಧಗಳಿಂದ ಮುಕ್ತಗೊಳಿಸಿ ಅವನಿಗೆ ಅಭಯ ಹಸ್ತ ನೀಡುತ್ತಾನೆ. ಇದರಲ್ಲಿ ದಯಾಳು ಭಗವಂತನ ನ್ಯಾಯವೇ ಸಿದ್ಧವಾಗುತ್ತದೆ. ಇಂತಹ ಭಾವನಾಮಯ ಭಕ್ತನನ್ನು ಶಿಕ್ಷೆಯಿಂದ ಮುಕ್ತಗೊಳಿಸುವುದೇ ಪರಮಾತ್ಮನ ರಾಜ್ಯದ ದಯೆ ಮತ್ತು ನ್ಯಾಯಪೂರ್ಣ ನಿಯಮ. ಆದುದರಿಂದಲೇ ಭಗವಂತನಲ್ಲಿ ದಯೆ ಮತ್ತು ನ್ಯಾಯ ಎರಡೂ ಜೊತೆಯಾಗಿಯೇ ಇರುತ್ತವೆ. ಶ್ರೀಗೀತೆಯಲ್ಲಿ ಭಗವಂತ ಸ್ಪಷ್ಟವಾಗಿ ಹೇಳಿದ್ದಾನೆ.

**ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥**
**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥**
**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

(೯/೩೦,೩೧; ೧೮/೬೬)

'ಅತ್ಯಂತ ದುರಾಚಾರಿಯೂ ಸಹ ಅನನ್ಯಭಾವದಿಂದ ನನ್ನ ಭಕ್ತನಾಗಿ ನನ್ನನ್ನು ನಿರಂತರ ಭಜಿಸುವವನು ಸಾಧುವೆಂದೇ ಭಾವಿಸಲು ಯೋಗ್ಯನಾಗುತ್ತಾನೆ. ಏಕೆಂದರೆ ಅವನು ಯಥಾರ್ಥವಾದ ನಿಶ್ಚಯಬುದ್ಧಿಯುಳ್ಳವನಾಗಿರುತ್ತಾನೆ. ಪರಮೇಶ್ವರನ ಭಜನೆಗೆ ಸಮಾನವಾದುದು ಬೇರೆ ಯಾವುದೂ ಸಹ ಇಲ್ಲವೆಂದು ಅವನು ನಿಶ್ಚಯಮಾಡಿಕೊಂಡಿರುತ್ತಾನೆ. ಆದುದರಿಂದ ಅವನು ಬಹು ಬೇಗ ಧರ್ಮಾತ್ಮಾ ಆಗಿಬಿಡುತ್ತಾನೆ ಮತ್ತು ಶಾಶ್ವತವಾಗಿರುವ ಪರಮ ಶಾಂತಿಯನ್ನು ಪಡೆಯುತ್ತಾನೆ. ಎಲೈ ಅರ್ಜುನ! ನನ್ನ ಭಕ್ತನು ಎಂದಿಗೂ

ಹಾಳಾಗುವುದಿಲ್ಲ–ಎಂಬುದನ್ನು ನೀನು ನಿಶ್ಚಯ ಪೂರ್ವಕವಾಗಿ ಸತ್ಯವೆಂದು ತಿಳಿ. ಆದುದರಿಂದ ಎಲ್ಲಾ ಕರ್ಮಗಳ ಆಶ್ರಯವನ್ನು ತ್ಯಾಗಮಾಡಿ ಕೇವಲ ಏಕಮಾತ್ರ ಸಚ್ಚಿದಾನಂದಘನ ವಾಸುದೇವ ಪರಮಾತ್ಮನಾದ ನನ್ನಲ್ಲಿ ಅನನ್ಯ ಶರಣಾಗತಿಯನ್ನು ಪಡೆದುಕೋ, ನಾನು ನಿನ್ನನ್ನು ಸಮಸ್ತ ಪಾಪಗಳಿಂದ ಮುಕ್ತಗೊಳಿಸುವೆನು, ನೀನು ಶೋಕಪಡಬೇಡ.'

❑❑❑

ಹರಿಃ ಓಂ ತತ್ಸತ್